# ಪ್ರಕಾಶಕರ ನುಡಿ

ಕನ್ನಡದ ನಗೆಬರಹಗಾರರಲ್ಲಿ ಶ್ರೀ ನಾಡಿಗೇರ್ ಕೃಷ್ಣರಾಯರು ವಿಶಿಷ್ಟ ಸ್ಥಾನ ಪಡೆದಿದ್ದಾರೆ. ಇತ್ತೀಚೆಗೆ ಪ್ರಕಟವಾದ ಈ ಲೇಖಕರ **"ಕೇಡಿಗನ ಕಿಡಿಗಳು"** ವಿಶೇಷ ಜನಪ್ರಿಯವಾಗಿದೆ. ಶ್ರೀ ನಾಡಿಗೇರ್‌ರವರ ನಗೆಬರಹಗಳ ಸಂಗ್ರಹಗಳು ಹಲವಾರು ಪ್ರಕಟವಾಗಿವೆ. ಒಂದು ಕಾದಂಬರಿಯೂ (**ಎದಿರೇಟು**) ಹೊರಬಿದ್ದಿದೆ. **ತಲಹರಟೆ, ಕಸದ ಬುಟ್ಟಿ, ಅಡ್ಡಾದಿಡ್ಡಿ, ಹರಕು-ಮುರಕು** ಮತ್ತು **ಹಾಳು-ಮೂಳು**—ಇವು ಈ ಲೇಖಕರ ಇತರ ಜನಪ್ರಿಯ ಸಂಕಲನಗಳು.

ಎಂದಿನಂತೆ, ಈ ಸಾರಿಯೂ ಸಹ ನಾವು ಮತ್ತೊಂದು ಹೊಸ ಹಾದಿಯನ್ನು ತುಳಿದಿದ್ದೇವೆ.

ಶ್ರೀ ನಾಡಿಗೇರ್‌ರವರ ಅತ್ಯುತ್ತಮ ನಗೆಬರಹಗಳನ್ನೆಲ್ಲಾ ಒಂದುಗೂಡಿಸಿ, **"ನಾಡಿಗೇರರ ನಗೆಬರಹಗಳು"** ಎಂಬ ಶೀರ್ಷಿಕೆಯಿಂದ ಪ್ರಕಟಿಸುವವರಾಗಿದ್ದೇವೆ. ಈಗ ನೀವು ಓದುವುದು ಈ ಶೀರ್ಷಿಕೆಯ ಪ್ರಥಮ ಕಿರಣ. ಈ ಸಂಕಲನದಲ್ಲಿ 'ತಲಹರಟೆ', 'ಕಸದ ಬುಟ್ಟಿ' 'ಅಡ್ಡಾದಿಡ್ಡಿ' ಮತ್ತು 'ಹರಕು ಮುರಕು'—ಈ ನಾಲ್ಕು ಪುಸ್ತಕಗಳಿಂದ ಹದಿನೆಂಟು ಆಕರ್ಷಕ ನಗೆಬರಹಗಳನ್ನು ಆರಿಸಿ ಪ್ರಕಟಿಸಲಾಗಿದೆ; ವೈವಿಧ್ಯತೆಗೆ ಈ ಸಂಕಲನದಲ್ಲಿ ಪ್ರಾಶಸ್ತ್ಯ ಕೊಡಲಾಗಿದೆ.

ನಮ್ಮ ಓದುಗರಿಗೆ ಈ ಸಂಕಲನ ರುಚಿಸುವುದೆಂಬ ನಂಬಿಕೆ ನಮಗಿದೆ.

— ಪ್ರಕಾಶಕರು

# ಈ ಸಂಕಲನದಲ್ಲಿ . . . . .

# ನನ್ನ ಆಯುರ್ವೇದಾ-ಶ್ರಮ

ಆಯುರ್ವೇದ ವಿದ್ಯೆಯು ಮುಗಿಲ ಮೇಲಿನ ಮೋಡವು ಕರಗುವಂತೆ ದಿನದಿನವೂ ಹೀನಸ್ಥಿತಿಯನ್ನೈದುವುದನ್ನು ಕಂಡು ಮರುಗಿ ನಾನು ಈ ವಿದ್ಯೆಯನ್ನು ಕಲಿಯಬೇಕಾಯಿತು. ನನ್ನ ಸಂಸಾರ ಶಕಟವು ನಿರಾಯಾಸ ವಾಗಿ ಸಾಗುತ್ತಿದ್ದರೂ ಕೇವಲ ಅಳಿದುಹೋಗುತ್ತಿರುವ ನಮ್ಮ ಸಂಸ್ಕೃತಿಗೆ ನವಚೇತನವನ್ನು ತುಂಬುವುದರ ಸಲುವಾಗಿ ಬಹಳ ಕಷ್ಟಪಟ್ಟು ಕಲಿತಿದ್ದೇನೆ. ಈಚೆಗೆ ಆಯುರ್ವೇದಶಾಲೆಗಳೂ ವಿಶ್ವವಿದ್ಯಾಲಯಗಳೂ ಸ್ಥಾಪಿತವಾಗಿವೆ. ಆದರೆ ನನ್ನ ಕಾಲದಲ್ಲಿ ಹಾಗಿರಲಿಲ್ಲ. ಆದ್ದರಿಂದ ನಮ್ಮೂರಿನ ಎಂಬತ್ತು ವರ್ಷ ಮಿಕ್ಕಿದ ಅಳಲೇಕಾಯಿ ರಾಮಾಪಂಡಿತರ ಜ್ಞಾನಭಂಡಾರಕ್ಕೆ ಕನ್ನ ಹಾಕಿದೆನು. ಅಳಲೇಕಾಯಿ ಪಂಡಿತರೆಂಬುವುದು ಅವರ ಅನ್ವರ್ಥನಾಮ, ಅವರು ಎಲ್ಲ ಔಷಧಗಳಿಗೂ ಅಳಲೇಕಾಯಿ ಉಪಯೋಗಿಸುತ್ತಿದ್ದುದೇ ಅದಕ್ಕೆ ಕಾರಣ.

ವಿದ್ಯೆಯನ್ನು ಕಲಿತುದು ಆಯಿತು. ಆದರೆ ಗಿರಾಕಿಗಳ ಸುಳಿವೇ ಇಲ್ಲ! ಏನುಮಾಡುವುದು? ನಾಸಿರುವುದು ಬಯಲುಸೀಮೆ. ಎಲ್ಲರೂ ವೃಷಕಾಯರು. ಅವರಿಗೆ ಕಾಯಿಲೆ ಬರುವುದಿಲ್ಲ. ಬಂದರೂ ಔಷಧವನ್ನು ತೆಗೆದುಕೊಳ್ಳುವುದಿಲ್ಲ. ದುಡ್ಡುಕೊಟ್ಟು ಔಷಧ ತೆಗೆದುಕೊಳ್ಳುವುದು ಮಹಾ ಪಾತಕವೆಂದು ತಿಳಿದಿದ್ದಾರೆ. ಕಷ್ಟಾರ್ಜಿತದಿಂದ ಸಂಪಾದಿಸಿದ ನನ್ನ ಜ್ಞಾನಕ್ಕೆ ತುಕ್ಕು ಹಿಡಿಯುತ್ತ ಬಂದಿತು. ನಮ್ಮ ಊರಿನವರು, ಆರಂಭದಲ್ಲಿ ನನ್ನಲ್ಲಿ

ಔಷಧ ತೆಗೆದುಕೊಂಡರು. ಆದರೆ ಅವರ ದುರ್ದೈವದಿಂದಲೋ, ನನ್ನ ದುರ್ದೈವದಿಂದಲೋ ಕೆಲವರಿಗೆ ಗುಣವಾಗಲಿಲ್ಲ. ಕೆಲವರು ಸತ್ತುಹೋದರು. ಅದರಲ್ಲಿ ನನ್ನದೇನು ತಪ್ಪು? ಅವರ ಆಯುಸ್ಸು ಕಡಿಮೆಯಾಗಿದ್ದರೆ ನಾನು ಮಾಡುವುದೇನು? ಔಷಧವನ್ನು ತುಂಬಬಹುದು, ಆದರೆ ಆಯುಸ್ಸನ್ನು ತುಂಬುವುದಕ್ಕಾಗುವುದೆ? ಅನೇಕರು ಪಂಡಿತರಿಗೆ ಹಸ್ತಗುಣವು ಚೆನ್ನಾಗಿಲ್ಲ ವೆಂದರು. ಕೆಲವರು ನಾಡೀ ಪರೀಕ್ಷೆ ಸಾಲದೆಂದರು. ಮತ್ತೆ ಕೆಲವರು ನನಗೆ ರೋಗಜ್ಞಾನ ಚೆನ್ನಾಗಿ ಆಗುತ್ತದೆಯೆಂದೂ, ಆದರೆ ಔಷಧಜ್ಞಾನವು ಸಾಲ ದೆಂದರು. ತಿಳಿಯದ ಜನರಿಗೆ ತಿಳಿಹೇಳುವುದು ಬಹುಕಷ್ಟ. ಅಂತೂ ಗಿರಾಕಿಗಳಿಲ್ಲದೆ ಹರತಾಳವನ್ನಾಚರಿಸಬೇಕಾಯಿತು.

ಇದು ಕೊನೆಯವರೆಗೆ ಸಾಗುವ ಮಾತಲ್ಲ. ನಮ್ಮಲ್ಲಿ ಅನೇಕರು ಬೇರೆ ಬೇರೆ ದೇಶದಲ್ಲಿಯೂ, ವಿದೇಶಗಳಲ್ಲಿಯೂ ತಯಾರಾದ ಔಷಧಗಳನ್ನು (Patent Medicines) ಈಚೆಗೆ ಉಪಯೋಗಿಸುವದಕ್ಕೆ ಆರಂಭಿಸಿ ದ್ದಾರೆ. ಅವರಂತೆ ಔಷಧಿಗಳನ್ನು ತಯಾರಿಸುವುದರ ಸಲುವಾಗಿ ಒಂದು ಔಷಧಾಲಯ (Pharmacy) ವನ್ನು ನನ್ನ ಹೆಸರಿನ ಮೇಲೆ ತೆರೆದಿದ್ದೇನೆ. ಅದಕ್ಕೆ "ಕೃಷ್ಣಾ ಫಾರ್ಮಸಿ" ಎಂದು ಯಥಾವಿಧಿಯಾಗಿ ನಾಮಕರಣವೂ ಆಗಿರುತ್ತದೆ.

ಔಷಧದ ಗುಣವು ಅದರ ಹೆಸರಿನಿಂದಲೇ ತಿಳಿಯಬೇಕು. ಅದಕ್ಕಾಗಿಯೆ ನನ್ನ ಕಂಪನಿಯ ಔಷಧಗಳಿಗೆ ಜನರಂಜಕವಾಗಿಯೂ, ಜನರಿಗೆ ತಿಳಿಯು ವಂತೆಯೂ ಹೆಸರುಗಳನ್ನು ಕೊಟ್ಟಿದ್ದೇನೆ. ಹಸ್ತಪತ್ರಿಕೆಗಳು ಎಲ್ಲ ಕಡೆ ಗಳಲ್ಲಿಯೂ ಸಾವಿರಗಟ್ಟಲೆ ಹಂಚಿದ್ದಾಗಿದೆ. ಹಸ್ತಪತ್ರಿಕೆಯ ಮಾದರಿಯನ್ನು ಓದುಗರ ಅವಗಾಹನೆಗಾಗಿ ಕೆಳಗೆ ಕೊಟ್ಟಿದೆ.

ನಮ್ಮ ಫಾರ್ಮಸಿಯಲ್ಲಿ ತಯಾರಾಗುವ ಔಷಧಿಗಳು :—

೧. ಹಿಜಡಾರಿ :—ಇದರ ಸೇವನೆಯಿಂದ ನಪುಂಸಕತ್ವವು ಹೋಗಿ ಧೀರರೂ, ಶೂರರೂ ಆಗಿದ್ದಾರೆ. ಅನೇಕ ಜನ ಸ್ತ್ರೀಯರು ಇದರ ಸೇವನೆ ಯಿಂದ ಪುರುಷರಾಗಿದ್ದಾರೆ.

## ನನ್ನ ಆಯುರ್ವೇದಾಶ್ರಮ

೨. ಪುತ್ರಕಾಮೇಷ್ಟಿ ಗುಟಿಕಾ :— ಈ ಗುಳಿಗೆಗಳಿಂದ ಮಕ್ಕಳನ್ನು ಹೊಂದಿ ಮನೆಯನ್ನು ನಂದಗೋಕುಲವನ್ನಾಗಿ ಮಾಡಿಕೊಳ್ಳಿರಿ.

೩. ಜಂತೋಡ್ :— ಇದರ ಸೇವನೆಯಿಂದ ಜಂತುಗಳು (ದುಷ್ಟ ಜಂತುಗಳಲ್ಲ— ಹೊಟ್ಟೆಯಲ್ಲಿರುವವು) ನಾಶವಾಗುವವು.

೪. ದಮ್ಮರಿ :— ಉಬ್ಬಸ ರೋಗಕ್ಕೆ ರಾಮಬಾಣ ಅಥವಾ ಕೃಷ್ಣ ಚಕ್ರ. ಉಬ್ಬಸರೋಗವಿಲ್ಲದವರೂ ಉಪಯೋಗಿಸಬಹುದು. ಏನೂ ತೊಂದರೆ ಇಲ್ಲ.

೫. ಜ್ವರಸಂಹಾರಿ :— ಎಂತಹ ಜ್ವರವಿದ್ದರೂ ನಿಲ್ಲುವುದಿಲ್ಲ.

೬. ಹಲ್‌ತಿಕ್ :— ಮುತ್ತುಗಳಂತೆ ನಿಮ್ಮ ಹಲ್ಲುಗಳು ಆಗಬೇಕಾದರೆ, ಉಪಯೋಗಿಸಿರಿ. ಇಲ್ಲವಾದರೆ ಬೇಡ.

೭. ಸಾಫ್ ಜುಲಾಬ್ :— ನಿಮ್ಮನ್ನು ಪ್ರವೃತ್ತಿಮಾರ್ಗಕ್ಕೆ ಹಚ್ಚು ವುದಕ್ಕೆ ಇದೊಂದೇ ಸಾಧನ.

೮. ತಿಮಿರಾಂಜನ್ :— ನಿರ್ಬಲರಾದವರು ಹಗಲಲ್ಲಿ ತಿಮಿರು ಹೋಗುವುದಕ್ಕೆ ಉಪಯೋಗಿಸಬೇಕಾದ ಸಿದ್ಧೌಷಧ

೯. ಪ್ರೆಗ್ನೋಲ್ :— ಗರ್ಭಿಣಿ ಸ್ತ್ರೀಯರು ತಪ್ಪದೆ ತೆಗೆದುಕೊಳ್ಳಬೇಕು.

೧೦. ಕೇಶನಾಶಿನಿ ತೈಲ :— ನಿಮ್ಮ ಸೇಫ್ಟಿರೇಜರುಗಳನ್ನು ಬಿಸಾಡಿರಿ ! ನಿಮ್ಮ ಕ್ಷೌರಿಕನನ್ನು ಗಡೀಪಾರು ಮಾಡಿರಿ ! ನಮ್ಮ ಕೇಶನಾಶಿನಿ ತೈಲವನ್ನು ಉಪಯೋಗಿಸಿ, ಗಲ್ಲಗಳನ್ನು ನಾಲಿಗ್ರಾಮದಂತೆ ನುಣುಪಾಗಿ ಮಾಡಿಕೊಳ್ಳಿರಿ !!

೧೧. ಕೇಶವೃದ್ಧಿನಿ ತೈಲ :— ಈ ತೈಲದ ಬಗ್ಗೆ ನಡೆದ ಒಂದು ಘಟನೆಯನ್ನು ತಿಳಿಸುತ್ತೇವೆ. ಮುಂಬೈಪಟ್ಟಣದ, ಲೇಡಿ ಡಾಕ್ಟರ್ ಕ್ಷಮತಿಬಾಯಿಯವರಿಗೆ ನಮ್ಮ ಕೇಶವೃದ್ಧಿನಿ ತೈಲವನ್ನು ಕಳಿಸಿದ್ದೆವು. ಅದನ್ನು ಅವರು ಸುಮ್ಮನೆ ಮೂಸಿ ನೋಡಿದುದರಿಂದ ಮೀಸೆಗಳು ಹುಟ್ಟಿದವು. ಅವರು ಕೂಡಲೇ ಪತ್ರ ಬರೆದರು. ಅವರಿಗೆ ನಾವು ಕೇಶನಾಶಿನಿ ತೈಲವನ್ನು ಕಳಿಸಿ

ಡೆವು. ಮೀಸೆಗಳು ಉದುರಿಹೋದವು. ಅವರಿಂದ ಬಂದ ಯೋಗ್ಯತಾ ಪತ್ರವನ್ನು ನೋಡಬಹುದು

೧೨. ಶಿಶುನಾಲ್ :—ಮಕ್ಕಳ ರೋಗಕ್ಕೆ ದಿವ್ಯವಾದ ಔಷಧ.

೧೩. ಸೇಂಗೋಲ್ :—ಕಡಲೇಕಾಯಿ ಸತ್ವದ ಎಣ್ಣೆ. ಹಸ್ತಸ್ಪರ್ಶವಿಲ್ಲದೆ ತಯಾರಿಸಿದ್ದು ತುಪ್ಪದ ಬದಲು ಇದನ್ನು ಉಪಯೋಗಿಸಿದರೆ ಯಾರೂ ಬೇಡವೆನ್ನುವುದಿಲ್ಲ.

ಇವಲ್ಲದೆ, ಇತರ ಲೇಹ್ಯಗಳು, ಅರಿಷ್ಟಗಳು, ತೈಲಗಳು ದೊರೆಯುತ್ತವೆ. ತ್ವರೆಮಾಡಿರಿ !

# ಪರಧ್ಯಾನತೆಯ ಪ್ರಸಂಗಗಳು

ಅಧ್ಯಾಪಕರು ಮರೆವು ಅಥವಾ ಪರಧ್ಯಾನತೆಯನ್ನು ಬಹು ಕಷ್ಟಪಟ್ಟು ಸಾಧಿಸಿದ್ದಾರೆ. ಅಧ್ಯಾಪಕರ ಈ ವಿಶೇಷ ಗುಣವು ಬರಹಗಾರರಿಗೂ, ಕುಚೋದ್ಯಗಾರರಿಗೂ ವಿಷಯಗಳನ್ನು ಹೇರಳವಾಗಿ ಒದಗಿಸಿದೆ. ನನ್ನ ಪಾಲಿಗೆ ಸಿಕ್ಕಿರುವ ಕೆಲವು ವಿನೋದ ಪ್ರಸಂಗಗಳನ್ನು ಉಲ್ಲೇಖಿಸಿದ್ದೇನೆ.

ಸಾಮಾನ್ಯವಾಗಿ ಅಧ್ಯಾಪಕರು ಈ ಒಂದು ವಿಶಿಷ್ಟ ಗುಣದಿಂದಲೇ ಬಹುಮಟ್ಟಿಗೆ ಬೆಳಕಿಗೆ ಬಂದಿದ್ದಾರೆ. ಇಲ್ಲದಿದ್ದರೆ ಅವರೂ ಸಹ, ತಾಲ್ಲೂಕು ಕಚೇರಿಯ ಗುಮಾಸ್ತರು, ಅಂಗಡಿಕಾರರು ಮುಂತಾದ ಇತರ ಪ್ರಾಣಿಗಳಂತೆ ಅನಾಮಧೇಯರಾಗಿಯೇ ಉಳಿಯುತ್ತಿದ್ದರು.

*  *  *  *

ಶಾಲೆಯಲ್ಲಿ ಹಾಜರಿ ತೆಗೆದುಕೊಳ್ಳುವ ಸಮಯ. ಹುಡುಗರು ವಿಪರೀತ ಗಲಾಟೆ ಮಾಡುತ್ತಿದ್ದರು. ಶಿಕ್ಷಕನಿಗೆ (ಶಿಕ್ಷಿಸುವವನಿಗೆ ಶಿಕ್ಷಕನೆಂದು ಹೆಸರು) ವಿಪರೀತ ಸಿಟ್ಟು ಬಂದಿತು. ಗುಡುಗು ದನಿಯಿಂದ ಗುಡುಗಿದ. "ಪ್ರೆಸೆಂಟ್ ಆದವರು ಪ್ರೆಸೆಂಟ್ ಅನ್ನಿ, ಆಬ್ಸೆಂಟ್ ಆದವರು ಆಬ್ಸೆಂಟ್ ಅನ್ನಿ." ಕಡೆಯ ಬೆಂಚಿನಲ್ಲಿ ಕುಳಿತಿದ್ದ ಹುಡುಗನೊಬ್ಬನು ಕೇಳಿದ. "ಆಬ್ಸೆಂಟ್ ಆದವನು ಆಬ್ಸೆಂಟ್ ಅಂತ ಹೇಗೆ ಹೇಳುವುದು ಸಾರ್?"

ಹುಡುಗನ ಪ್ರಶ್ನೆಗೆ ಉಪಾಧ್ಯಾಯರಿಂದ ಉತ್ತರವು ಎರಡು ಏಟುಗಳ ರೂಪದಲ್ಲಿ ದೊರೆಯಿತು.

*  *  *  *

ಒಂದು ಸಾರಿ ಪ್ರೊಫೆಸರ್ ಒಬ್ಬರು ಪರಧ್ಯಾನತೆಯಲ್ಲಿ ಲೀನರಾಗಿದ್ದರು. ಅವರ ಹೆಂಡತಿಗೆ ಗಂಡನ ವರ್ತನೆ ಸರಿಬೀಳಲಿಲ್ಲ. ಆಕೆ ಗಂಡನನ್ನು

ಕೇಳಿದರು. "ಏನೂ ಅಂದ್ರೆ, ಮೂರು ದಿನವಾಯಿತು ನನ್ನನ್ನು ಒಂದು ಸಾರಿ ಕೂಡ ಚುಂಬಿಸಲಿಲ್ಲವಲ್ಲ?" ಪ್ರೊಫೆಸರ್ ತಲೆಕೆರೆಯುತ್ತ, 'ಇರಬಹುದು, ಆದರೆ ಈ ಮೂರು ದಿನಗಳಿಂದ ನಾನು ಚುಂಬಿಸುತ್ತಿದ್ದ ಸ್ತ್ರೀ ಯಾರೆಂಬುದನ್ನು ಹೇಳಬಲ್ಲೆಯಾ?" ಎಂದು ಕೇಳಿದರು. ಪ್ರೊಫೆಸರರ ಹೆಂಡತಿಯು ದಾಂಪತ್ಯ ವಿಚ್ಛೇದನಕ್ಕೆ ಅರ್ಜಿ ಹಾಕಿಕೊಂಡಳೆಂದು ನಾವು ಬರೆಯುವ ಅಗತ್ಯವಿಲ್ಲವಷ್ಟೆ?

* * * *

ಕಾಲೇಜಿನ ಲೆಕ್ಚರರ್ ಒಬ್ಬರು, ಸ್ನಾನಮಾಡಿ ಕ್ರಾಪ್ ಬಾಚಿಕೊಳ್ಳಲು ಕನ್ನಡಿಯ ಮುಂದೆ ನಿಂತುಕೊಂಡರು. ಹತ್ತು ನಿಮಿಷವಾಯಿತು, ಅರ್ಧ ಗಂಟೆಯಾಯಿತು, ಒಂದು ಗಂಟೆಯಾಯಿತು, ಎರಡು ಗಂಟೆಯಾಯಿತು. ಕನ್ನಡಿಯನ್ನು ನೋಡುತ್ತಲೇ ನಿಂತುಕೊಂಡಿದ್ದಾರೆ ಅವರ ಹೆಂಡತಿ ಅಡಿಗೆಮಾಡಿಕೊಂಡು ಕಾದು ಕಾದು ಬೇಸತ್ತು ಹೋದರು ಅಕಸ್ಮಾತ್ ಯಾವುದೋ ಕೆಲಸದ ನಿಮಿತ್ತ ಅವರು ಕೋಣೆಗೆ ಬಂದರು. ಗಂಡನು ಕನ್ನಡಿಯನ್ನು ಎವೆಯಿಕ್ಕದೆ ನೋಡುತ್ತಿರುವುದನ್ನು ನೋಡಿ ಆಕೆಗೆ ಬಹಳ ಆಶ್ಚರ್ಯವಾಯಿತು "ಇದೇನು ಹೀಗೇಕೆ ನಿಂತಿದ್ದೀರಿ, ಊಟಕ್ಕೆ ಬರುವುದಿಲ್ಲವೆ?" ಆಕೆ ಒಟಗುಟ್ಟಿದರು. "ನೋಡು, ಆ ಮನುಷ್ಯನನ್ನು ಎಲ್ಲಿಯೋ ನೋಡಿದ ಜ್ಞಾಪಕವಿದೆ. ಆದರೆ ಅವನನ್ನು ಎಲ್ಲಿ ನೋಡಿದ್ದೇನೆಂಬುದನ್ನು ಪತ್ತೆಹಚ್ಚಲು ಸಾಧ್ಯವಾಗಿಲ್ಲ" ಎಂದು ಹೇಳಿದರು. ಹೆಂಡತಿಗೆ ಈ ಮಾತುಗಳನ್ನು ಕೇಳಿ ಆಶ್ಚರ್ಯವಾಯಿತು. ಆದರೆ ಆಶ್ಚರ್ಯಪಡುವುದಕ್ಕಿಂತ ಹೆಚ್ಚಾಗಿ ಆಕೆ ಏನನ್ನೂ ಮಾಡಲು ಅಸಮರ್ಥಳಾದಳು.

* * * *

ಒಂದು ದಿನ ಅಧ್ಯಾಪಕರೊಬ್ಬರು ಹವಾ ಸೇವನೆಗೆಂದು ಸಾಯಂಕಾಲ ಊರ ಹೊರಗೆ ಹೊರಟಿದ್ದರು. ಬಯಲಿನಲ್ಲಿ ಮೇಯುತ್ತಿದ್ದ ಒಂದು ಹಸುವಿಗೆ ಢಿಕ್ಕಿ ಹೊಡೆದರು. ಕೂಡಲೆ ನಡೆದ ಪ್ರಮಾದವನ್ನು ತಪ್ಪಿಸಲು (ಅವರು ಯಾರೋ ಹೆಂಗಸಿಗೆ ಢಿಕ್ಕಿ ಹೊಡೆದರೆಂದು ಭಾವಿಸಿಕೊಂಡು) "ಅಮ್ಮಾ ದಯವಿಟ್ಟು ಕ್ಷಮಿಸಿ, ನಾನು ಎಲ್ಲಿಯೋ ನೋಡುತ್ತ ನಿಮಗೆ

ಢಿಕ್ಕಿ ಹೊಡೆದೆ" ಎಂದರು. ತಾವು ಢಿಕ್ಕಿ ಹೊಡೆದವನು ಹೆಂಗಸಲ್ಲವೆಂದೂ, ಅದೊಂದು ಹಸುವೆಂದು ತಿಳಿದ ಕೂಡಲೇ ನಾಚಿಕೆಯಿಂದ ಮುಖವನ್ನು ಕೆಳಕ್ಕೆ ಮಾಡಿಕೊಂಡು (ಅನೇಕರು ನಾಚಿಕೆಯಾದಾಗ ಮಾಡುವುದೇ ಹಾಗೆ) ಹೊರಟು ಹೋದರು.

ಇನ್ನೊಂದು ದಿನ ಸಾಯಂಕಾಲ ಅಧ್ಯಾಪಕರು ಹವಾ ಯಾತ್ರೆಗೆ ಹೊರಟಿದ್ದಾಗ ಅವರ ತಲೆ ಒಂದು ಕಟು ಸಮಸ್ಯೆಯನ್ನು ಬಿಡಿಸುವುದರಲ್ಲಿ ತೊಡಗಿತ್ತು. ಹಾಗೆಯೇ ಹೋಗುತ್ತ ಅಕಸ್ಮಾತ್ತಾಗಿ (ಇಂತಹ ಕೈ ಮಿಕ್ಕಿ ಹೋದ ಪ್ರಸಂಗಗಳೆಲ್ಲಾ ಅಕಸ್ಮಾತ್ತಾಗಿಯೇ ಸಂಭವಿಸುವುದು) ಒಬ್ಬ ಹೆಂಗಸಿಗೆ ಢಿಕ್ಕಿ ಹೊಡೆದರು. ಅಧ್ಯಾಪಕರು ಸಿಟ್ಟಿನಿಂದ ಗುಡುಗಿದರು. "ವಾರಸುದಾರರಿಲ್ಲದ ಈ ಹಸುಗಳನ್ನೆಲ್ಲಾ ದೊಡ್ಡಿಗೆ ಹಾಕಬೇಕು" ಆ ಹೆಂಗಸು ಪ್ರೊಫೆಸರರ ಮೇಲೆ ಬೈಗಳದ ಮಳೆಯನ್ನಾರಂಭಿಸಿದಳು. ನೀವು ರೇಲ್ವೆ ಸೇತುವೆಯ ಕೆಳಗಡೆ ನಿಂತಾಗ, ಮೇಲ್ಗಡೆ ವೇಗವಾಗಿ ರೈಲು ಓಡುತ್ತಿದ್ದರೆ ಯಾವ ಶಬ್ದ ಕೇಳಿಬರುತ್ತದೆಯೋ, ಈ ಬೈಗಳದ ಧಾಟಿಯಾದರೂ ಹಾಗೆಯೇ ಇರುತ್ತೆ.

ಬ್ರಿಟಿಷ್ ಯುದ್ಧ ಹಡಗನ್ನು ನೋಡಿದ ಜರ್ಮನ್ ಸಬ್‌ಮರೈನ್ ನಂತೆ ಅಧ್ಯಾಪಕರು ಪಲಾಯನ ಸೂಕ್ತವನ್ನು ಪಠಿಸಿದರು.

* * * *

ಒಬ್ಬ ತರುಣ ಡಾಕ್ಟರನ ಪರಧ್ಯಾನತೆಯ ಪ್ರಸಂಗವೊಂದು ಹೀಗಿದೆ.

ಒಬ್ಬ ತರುಣ ಡಾಕ್ಟರನ ಮದುವೆ ಮೆರವಣಿಗೆಯ ಸಮಯ. ಗಂಡ ಹೆಂಡಿರು ಕೈ ಹಿಡಿದುಕೊಳ್ಳಬೇಕೆಂದು ವರನ ಮತ್ತು ವಧುವಿನ ಬಂಧು ಮಿತ್ರರು ಆಗ್ರಹ ಮಾಡಿದರು. ಡಾಕ್ಟರು (ವರ) ವಧುವಿನ ಕೈ ಹಿಡಿದ. ಹಾಗೆಯೇ ನಾಡೀ ಪರೀಕ್ಷೆ ಮಾಡಿದ. ಆ ಕಸುಬುದಾರಿಕೆಯ ಗುಣವೆಲ್ಲಿ ಹೋಗಬೇಕು! ಥಟ್ಟನೆ ಹೇಳಿದ "ಎಲ್ಲಿ, ನಾಲಿಗೆ ತೆಗೆಯಮ್ಮ ನೋಡೋಣ?" ಜನಸಂದಣಿ ಘೊಳ್ಳೆಂದಿತು.

* * * *

ನನ್ನ ಸ್ನೇಹಿತ ನಾರಾಯಣರಾಯ ಸಿಗರೇಟ್ ಸೇದುವುದರಲ್ಲಿ ಅಗ್ರಗಣ್ಯ. ದಿನಕ್ಕೆ ೫-೬ ಪ್ಯಾಕ್ ಸಿಗರೇಟ್‌ಗಳನ್ನು ಭಸ್ಮೀಭೂತವಾಗಿ ಮಾಡಿಬಿಡುತ್ತಾನೆ.

ಚಿಕ್ಕಂದಿನಲ್ಲಿ ಇವನು ಬೀಡಿ, ಸಿಗರೇಟ್, ಯಾವುವನ್ನೂ ಸೇದುತ್ತಿರಲಿಲ್ಲ. ಮನೆಯಲ್ಲಿ ಬರೀ ನೀರು ಸೇದುಕೊಂಡಿದ್ದ. ಆದರೆ ದುಸ್ಸಹವಾಸದಿಂದ (ನಮ್ಮ ಮನೆಯವರು ಬೇರೆ ಹುಡುಗರಿಗೆ ಕೊಡುವ ಹೆಸರು ಮತ್ತು ಬೇರೆಯವರು ನಮಗೆ ಕೊಡುವ ಹೆಸರು) ಸಿಗರೇಟ್ ಸೇದುವುದನ್ನು ಅಭ್ಯಸಿಸಿದ. ಇವನಿಗೆ ಒಂದು ಸಾರಿ ವಿಪರೀತ ಕಾಯಿಲೆಯಾಯಿತು. ಕೊನೆಗೆ ಆಸ್ಪತ್ರೆಗೆ ಸಾಗಿಸಿದರು. ಅಂತೂ ಬದುಕಿದ. ನಾರಾಯಣರಾಯನ ಹೆಂಡತಿಯ ಮನೆಯವರು ಹುಡುಗಿಯ ಮಾಂಗಲ್ಯ ಗಟ್ಟಿಯಾಗಿದ್ದರಿಂದ ಬದುಕಿದನೆಂದೂ, ಅವನ ಮನೆಯವರು, ಅವನ ತಾಯಿಯ ಪುಣ್ಯದಿಂದ ಬದುಕಿದನೆಂದೂ, ಇನ್ನು ಕೆಲವರು ಡಾಕ್ಟರ ಹಸ್ತಗುಣದಿಂದ ಬದುಕಿದನೆಂದೂ, ಅವನು ಬದುಕಿಕೊಂಡಿದ್ದಕ್ಕೆ ವಿವರಣೆಗಳನ್ನು ಕೊಟ್ಟರು.

ಈ ಭಿನ್ನ ಭಿನ್ನವಾದ ವಿವರಣೆಗಳಿಂದ ಅವನು ನಿಜವಾಗಿಯೂ ಏತರಿಂದ ಬದುಕಿದ ಎಂಬುದು ತಿಳಿಯದಾಗಿದೆ. ಒಟ್ಟಿನ ಮೇಲೆ, ಬದುಕಬಾರದಾಗಿತ್ತು, ಬದುಕಿದ.

ರಾಯ ಕಾಯಿಲೆಯಿದ್ದಾಗ ಒಂದು ದಿನ ಎಂದಿನಂತೆ ನರ್ಸ್ ಬಂದು ಇವನ ಬಾಯಿಯಲ್ಲಿ ಥರ್ಮಾಮೀಟರ್ ಇಟ್ಟಳು. ನಾರಾಯಣರಾಯ ಕೂಡಲೇ ಹೇಳಿದ "ಬರಿ ಸಿಗರೇಟ್ ಬಾಯಲ್ಲಿ ಇಟ್ಟರೇ ಆಯಿತೆ, ಬೆಂಕಿಕಡ್ಡಿ ಗೀರಿ" ಎಂದ.

*     *     *     *

ಹೀಗೆ ಪರಧ್ಯಾನತೆ ಒಂದು ಅಂಟು ಜಾಡ್ಯದಂತೆ ಎಲ್ಲೆಲ್ಲಿಯೂ ಆವರಿಸಿದೆ. ಅದನ್ನು ಬಡಿದೋಡಿಸುವ ಚಿಕಿತ್ಸೆ ನಿಮಗಾದರೂ ತಿಳಿದಿದ್ದರೆ ದಯವಿಟ್ಟು ನನಗೆ ಬರೆಯುವಿರಾ?

# ಮತದಾನ

ದಾನಗಳಲ್ಲೆಲ್ಲಾ ಮತದಾನವೇ ಶ್ರೇಷ್ಠವೆಂದು ನಮಗೆ ಮೂರು ವರ್ಷಕ್ಕೊಂದಾವರ್ತಿ ನೆನಪಿಗೆ ಬರುತ್ತದೆ. ಕನ್ಯಾದಾನ, ಅನ್ನದಾನ ಇತ್ಯಾದಿ ದಾನಗಳಿಗಿಂತ ಮತದಾನವೇ ಶ್ರೇಷ್ಠವೆಂಬುದನ್ನು ಉಮೇದುವಾರರು ತರ್ಕದಿಂದ ಸಿದ್ಧಾಂತ ಮಾಡಿ ತೋರಿಸುತ್ತಾರೆ. ಆದರೆ ಇವರ ಸಿದ್ಧಾಂತ ಒಂದುಸಾರಿ ಮಾತ್ರ ವಿಫಲವಾಯಿತು. ಅದು ನಮ್ಮ ವೆಂಕಜ್ಜಿಯ ವಿಷಯದಲ್ಲಿ. ಅದು ಅವಳ ಮನಸ್ಸಿನ ಮೇಲೆ ಮೂಡಲೇ ಇಲ್ಲ. ಗ್ರಾಮ ನಿರ್ಮೂಲೀಕರಣ ಸಭೆಗೆ ಮತದಾನ ನಡೆದಿತ್ತು. ಹನ್ನೆರಡು ಸ್ಥಾನಗಳಿಗೆ ಮೂವತ್ತನಾಲ್ಕು ಜನ ಉಮೇದುವಾರರು ಸ್ಪರ್ಧಿಸಿದ್ದರು. ಎಲ್ಲೆಲ್ಲಿಯೂ ಕೋಲಾಹಲ.

ನಮ್ಮ ವೆಂಕಜ್ಜಿಗೂ ಮತದಾನದ ಹಕ್ಕಿತ್ತು. ಎಂದೂ ಆಕೆಯನ್ನು ನೋಡದ ಜನರನೇಕರು ಅವಳ ಆಯುರಾರೋಗ್ಯವನ್ನು ವಿಚಾರಿಸಿದರು. ಕೆಲವರಂತೂ ಹಳೆದಿನದ ಗೆಳೆಯರಂತೆ ಮಾತನಾಡಿಸಿದರು ಕಡೆಗೆ ತಾವು "ಬಂದ ಹದನೇನೆಂಬುದನ್ನು" ತಿರುಗಿಸಿ, ತಿರುಗಿಸಿ, ಕೆಮ್ಮಿ, ಗಂಟಲು ಸರಿಪಡಿಸಿಕೊಂಡು ತಿಳಿಸಿದರು. ಇಂತಹ ತಾರೀಖಿನ ದಿನ ಇಂತಹ ಸ್ಕೂಲು ಬಳಿ ಮತದಾನ ಮಾಡಬೇಕೆಂದು ಹೇಳಿದರು. ಅಜ್ಜಿಯ ಮನೆಯ ಮುಂದಿನ ಚರಂಡಿಯನ್ನು ಸರಿಪಡಿಸಿಕೊಡುತ್ತೇವೆಂದು ಎದೆ ಮೇಲೆ ಕೈಯಿಟ್ಟುಕೊಂಡು ಆಶ್ವಾಸನವಿತ್ತರು.

ಅಜ್ಜಿಗೆ ವಿಸ್ಮಯವಾಯಿತು. ಏನಿದು? ಮತದಾನ! ಮತದಾನ!! ಅಲ್ಲದೆ ಅಜ್ಜಿಯು ಒಂಬತ್ತು ವರ್ಷಕ್ಕೆ ವಿಧವೆಯಾದಳು. (ಅವಳು ನಮಗೆ ಕೇವಲ ವಯೋಧಿಕಾರದಿಂದ ಅಜ್ಜಿ) ಅಂದಿನಿಂದ ಇಂದಿನವರೆಗೂ ಪುರಾಣಕ್ಕೆ ಹೋಗುತಲಿದ್ದಾಳೆ. ಆದರೆ ಯಾವ ಪುರಾಣದಲ್ಲಿಯೂ ಮತದಾನದಿಂದ

ಇಂತಿಷ್ಟು ಪುಣ್ಯ ಬರುತ್ತದೆಂದು ಹೇಳಿರಲಿಲ್ಲ. ಪರ್ವಕಾಲಗಳಲ್ಲಿ, ಗ್ರಹಣ ಕಾಲಗಳಲ್ಲಿ ಸುಮ್ಮನೆ ನದಿಯಲ್ಲಿ "ಡುಬುಕ್ಕನೆ" ಮುಳುಗಿದರೆ ಕೋಟಿಗಟ್ಟಲೆ ಯಜ್ಞಮಾಡಿದ ಫಲ ಬರುವುದೆಂದೂ ಮತ್ತು ಅದೇ ತಾರೀಖು ಅಥವಾ ತಿಥಿಗೆ ಹಿಂದೆ ಮಾಡಿದ ಪಾಪವೆಲ್ಲ ನಾಶವಾಗುವುದೆಂದೂ ದಕ್ಷಿಣೆ ತೆಗೆದುಕೊಳ್ಳುತ್ತಿದ್ದ ಬ್ರಾಹ್ಮಣರು ರಶೀದಿ ಕೊಡುತ್ತಿದ್ದರು. ಆದರೆ ಪುರಾಣದಲ್ಲಿ ಮತದಾನದ ವಿಷಯವನ್ನೇ ಆಕೆ ಕೇಳಿರಲಿಲ್ಲವಾದ್ದರಿಂದ ಮತದಾನ ಮಾಡಬಾರದೆಂದು ದೃಢನಿಶ್ಚಯಿಸಿದಳು.

ಇದಕ್ಕಿಂತಲೂ ಅಜ್ಜಿಯ ಮುಖ್ಯವಾದ ತೀರ್ಮಾನ ಒಂದುಂಟು. ಜನರೆಲ್ಲರೂ ತಮ್ಮ ತಮ್ಮ ಮತದಾನ ಮಾಡಿ ಜಾತಿಭ್ರಷ್ಟರಾದರೆಂದು ಹೇಳು ತ್ತಾಳೆ. ಇದ್ದ ತಮ್ಮ ಮತವನ್ನು ಇತರರಿಗೆ ದಾನ ಮಾಡಿದರೆ ಇನ್ನು ಅವರಿಗೆ ಉಳಿದುದೇನು? ಆದುದರಿಂದ ತಾನು ಖಂಡಿತವಾಗಿಯೂ ಮತದಾನ ಮಾಡುವುದಿಲ್ಲೆಂದಳು. ಅಂತೆಯೇ ತನ್ನ ವ್ಯಕ್ತಿತ್ವವನ್ನು ಕಾಪಾಡಿಕೊಂಡಳು. ವೆಂಕಜ್ಜಿಯ ಮತವು ಉಪಯೋಗಿಸಲ್ಪಡದೆ ಅವಸಾನ ಹೊಂದಿತು.

*　　*　　*　　*

ಮೊಹರಂ, ಕಾಮನಹಬ್ಬ ಇವು ವರ್ಷಕ್ಕೆ ಒಂದು ಸಾರಿ ಬರುತ್ತವೆ ಅದರಂತೆ ಸರಕಾರದವರು ಮತದಾನದ ಹಬ್ಬವನ್ನು ವರ್ಷಕ್ಕೆ ಒಂದು ಸಾರಿ ಏಕೆ ಏರ್ಪಡಿಸಕೂಡದು? ಮೊಹರಂ, ಕಾಮನಹಬ್ಬಗಳಂತೆ ಮತದಾನ ಹಬ್ಬವೂ ಕಣ್ಮನಗಳಿಗೆ ಆನಂದವಾಗಿರುತ್ತದೆ. ದಲ್ಲಾಲಿಗಳ ಮತ್ತು ಮತ ದಾರರ ಜೇಬಿಗೂ ಆನಂದವಾಗಿರುತ್ತೆ. ಊರಿನಲ್ಲೆಲ್ಲಾ ಸಡಗರ. ನಿರುದ್ಯೋಗಿ ಗಳಿಗೆ ಕೆಲಸ ಸಿಕ್ಕುತ್ತೆ. ಅವರೂ ಯಾವುದಾದರೊಂದು ಪಕ್ಷವನ್ನು ಹಿಡಿಯು ತ್ತಾರೆ. (ಕಾಂಗ್ರೆಸ್ ಪಕ್ಷವನ್ನು ಬಿಟ್ಟು) ಉಳಿದ ಸ್ವತಂತ್ರ, ಅತಂತ್ರ, ಹಿಂದುಳಿದ, ಮುಂದೆಬಂದ, ಹರಿಜನ, ಹರಜನ ಇತ್ಯಾದಿ ಪಕ್ಷಗಳಲ್ಲಿಯೇ ಅವರ ಬೇಳೆ ಬೇಯಲು ಮಾರ್ಗವಿದೆ. ಆದರೆ ಬಿಳಿಟೋಪಿಯ ಉಮೇದು ವಾರರು ದೇಶಸೇವೆ, ಮಾತೃಭೂಮಿ, ಏಕೀಕರಣ, ಕರ್ತವ್ಯ, ತ್ಯಾಗ ಮುಂತಾದ ದೊಡ್ಡ ದೊಡ್ಡ ಶಬ್ದಗಳ ಮಂಡಿಗೆಗಳನ್ನೇ ಉರುಳಿಸುತ್ತಾರೆಯೇ

ವಿನಾ ಒಂದು ಕಪ್ ತಣ್ಣೀರು ಸಹ ಕೊಡುವುದಿಲ್ಲ. ಆದುದರಿಂದ ಇವರ ಬಾಲ ಹಿಡಿದರೆ ಅನುಕೂಲವಿಲ್ಲ. ಇದಕ್ಕಿಂತಲೂ ಸ್ವತಂತ್ರ ಅಥವಾ ಅತಂತ್ರ ಉಮೇದುವಾರರನ್ನು ಹಿಡಿಯಬೇಕು.

ಉಮೇದುವಾರರನ್ನು ಕೇಳಿದರೆ ಪ್ರತಿಯೊಬ್ಬರೂ ತಮಗೆ ದೊರೆಯ ಬಹುದಾದ ಮತಗಳ ಸಂಖ್ಯೆ ಕೊಡುವರು. ಎಲ್ಲ ಉಮೇದುವಾರರು ಹೇಳುವ ಸಂಖ್ಯೆಯ ಮೊತ್ತವು ಸುಮಾರು ಮುಂಬೈ ನಗರದ ಜನಸಂಖ್ಯೆಯಾಗುತ್ತದೆ. ತಮ್ಮ ತಮ್ಮ ಜಾತಿಯವರಿಗೆ ಮಾಡಬಹುದಾದ, ಮಾಡಲೇಬೇಕಾದ ಕೆಲಸ ಗಳನ್ನು ಅತ್ಯಗತ್ಯವಾಗಿ ಮಾಡಿಕೊಡುತ್ತೇವೆಂದು ಆಣೆಯಿಟ್ಟುಕೊಳ್ಳುತ್ತಾರೆ. ಎಂದಿಲ್ಲದ ಅಂದು ಅವರ ಜಾತಿನಿಷ್ಠೆಯು ಕರಗಿ ಎಲ್ಲಿಂದಲೋ ನೀರು ನುಗ್ಗಿ ಹರಿಯುವುದು. ಚುನಾವಣೆ ಮುಗಿಯುವ ವರೆಗೂ ತಮ್ಮ ಜಾತಿಯ ಗುರುತುಗಳಾದ ಗಂಧ, ಅಕ್ಷತೆ, ವಿಭೂತಿ ಇತ್ಯಾದಿ ಧರಿಸಿಕೊಳ್ಳುತ್ತಾರೆ. ಯಾವಾಗಲೂ ಅಳಿಯದ ಒಂದು ಹುಸಿನಗೆಯು ಮೀಸೆಯ ತುದಿಯಲ್ಲಿ ಕುಣಿಯುತ್ತಿರುತ್ತದೆ ಚುನಾವಣೆ ಮುಗಿಯುವುದರೊಳಗಾಗಿ ಅವರ ತುಟಿ, ಬಾಯಿ, ಕೆನ್ನೆ ಇವುಗಳಿಗೆ ನೋವು ಬರಬಹುದಲ್ಲವೇ? ಮತ್ತು ವೇಷ ಭೂಷಣಗಳೂ ಸಹ ಸರಿಯಾಗಿರಬೇಕು. ಅದಕ್ಕೆ ಅವರು ತುಪ್ಪದಿಂದ ಅಥವಾ ಎಣ್ಣೆಯಿಂದ ಕರಿದ ಗರಿಗರಿ ಬಟ್ಟೆಗಳನ್ನೇ ಹಾಕಿಕೊಳ್ಳುತ್ತಾರೆ.

* * * *

ಊರಿನಲ್ಲಿ ಚುನಾವಣೆ ಆರಂಭವಾಯಿತೆಂದರೆ ಹೋಟೆಲಿನವರಿಗೂ, ಹೆಂಡದ ಅಂಗಡಿಯವರಿಗೂ ಬಹಳ ಲಾಭ. ಒಂದು ಸಾರಿ ನಮ್ಮೂರಿನಲ್ಲಿ ಹೋಟೆಲ ಕೃಷ್ಣಪ್ಪನೂ ಹೆಂಡದ ಕಂಟ್ರಾಕ್ಟದಾರ ವೆಂಕಟಪ್ಪನೂ ಉಮೇದು ವಾರರಾಗಿದ್ದರು. ಅವರಿಬ್ಬರೂ ಆರಿಸಿ ಬಂದರು. ವೆಂಕಟಪ್ಪ ಒಂದನೆಯ ಸ್ಥಾನವನ್ನೂ, ಕೃಷ್ಣಪ್ಪ ಎರಡನೆಯ ಸ್ಥಾನವನ್ನೂ ಪಡೆದರು. ಅವರು ಮಾಡಿದ ಉಪಾಯವಿಷ್ಟು: ತಮ್ಮ ತಮ್ಮ ಅಂಗಡಿಯ ಸರಕುಗಳನ್ನು ಮತ ದಾರರಿಗೆ ಉಚಿತವಾಗಿ ಯಥೇಷ್ಟವಾಗಿ ಹಂಚಿದರು.

ಕಾಂಗ್ರೆಸ್ ಪಕ್ಷ ಅಧಿಕಾರ ಸ್ವೀಕರಿಸಿದರೆ ಪಾನನಿರೋಧ ಕ್ರಮವನ್ನು

ಜಾರಿಗೆ ತರುವುದು ಖಂಡಿತ. ಇನ್ನು ಈ ಸಾಂಕ್ರಾಮಿಕ ಜಾಡ್ಯವು ಎಲ್ಲ ಕಡೆಗೂ ಹಬ್ಬಿದರೆ ಚುನಾವಣೆಗಳು ಮೊದಲಿನ ಹಾಗೆ ಹುರುಪಿನಿಂದ ನಡೆಯುವುದೇ ಇಲ್ಲ. ಹೆಂಡ ಕೇವಲ ಸಸ್ಯಸಂಬಂಧವಾದುದೆಂದೂ ಮತ್ತು ಇದು ಸಂಪೂರ್ಣ ಸ್ವದೇಶಿಯೆಂದೂ ಇದರ ನಿರೋಧವನ್ನು ನಿರೋಧಿಸುವುದಕ್ಕೆ ಹೆಂಡದ ಕಂಟ್ರಾಕ್ಟರ್ ವೆಂಕಟಪ್ಪ ಒಂದು ನಿಲುವಳಿ ಸೂಚನೆಯನ್ನು ತರಲಿದ್ದಾನೆಂದು ಖಚಿತವಾಗಿ ತಿಳಿಯಬಂದಿದೆ !

ಚುನಾವಣೆಗೆ ನಿಲ್ಲುವವರು ಕೇವಲ ಅಧಿಕಾರದ ಆಸೆಗೆ ಮೆಂಬರುಗಳಾಗುತ್ತಾರೆಯೇ ಹೊರತು ದುಡಿಯುವುದಕ್ಕಲ್ಲ. ಹಾಗಾದರೆ ಅಧಿಕಾರವಾದರೂ ಏನು ? ಎಂದು ಅಪಸ್ವರದಲ್ಲಿ ನೀವು ಕೇಳಬಹುದು. ಊರಿನ ದೊಡ್ಡ ಮನುಷ್ಯರೆಂದು ಹೇಳಿಕೊಳ್ಳಬಹುದು. ಕೆಲವೆಡೆ ನಿಂತ ಉಮೇದುವಾರರಿಗೆ ಪ್ರಜಾಪ್ರತಿನಿಧಿಸಭೆ, ನಗರಸಭೆ, ನ್ಯಾಯವಿಧಾಯಕಸಭೆ, ಜಿಲ್ಲಾ ಬೋರ್ಡ್ ಇವುಗಳ ಪರಸ್ಪರ ವ್ಯತ್ಯಾಸಗಳು ಸಹ ತಿಳಿದಿರುವುದಿಲ್ಲ. ಒಂದು ಸಾರಿ ನಮ್ಮೂರಿನ ಮುನ್ಸಿಪಲ್ ವೈಸ್‌ಪ್ರೆಸಿಡೆಂಟರಿಗೆ ಬೇರೆ ಒಂದು ದೊಡ್ಡ ಊರಿಗೆ ವರ್ಗವಾಗಿರುತ್ತದೆಂದು ಒಬ್ಬ ಕದೀಮ ಅವರಿಂದ ತಿಂಡಿ ಗಿಟ್ಟಿಸಿದ್ದ. ನೀವು ನನ್ನ ಮಾತು ಸಟೆಯೆಂದು ಮೂಗು ಮುರಿಯಬಹುದು. ಆದರೆ ನಾನು ಹೇಳುವುದು ಬರಹವಲ್ಲಿರುವುದರಿಂದ ಅದನ್ನು ನೀವು ನಂಬುವುದಕ್ಕೆ ಯಾವ ಅಭ್ಯಂತರವೂ ಇಲ್ಲ.

*  *  *  *

ಈ ಒಂದು ಸ್ವಾರಸ್ಯ ಪ್ರಕರಣ ಕೇಳಿ. ಒಂದು ಸಾರಿ ಪ್ರಜಾಪ್ರತಿನಿಧಿ ಸಭೆಗೆ ಚುನಾವಣೆ ನಡೆಯಿತು. ಆ ಚುನಾವಣೆ ಬಂಡವಾಳ ಇಷ್ಟು : ಯಾರು ಹೆಚ್ಚು ಹಣ ತೂರುತ್ತಾರೋ ಅವರೇ ಸದಸ್ಯರು. ಆ ಚುನಾವಣೆಯ ಒಂದು ಸ್ಥಾನಕ್ಕೆ ಇಬ್ಬರು ಪ್ರತಿಸ್ಪರ್ಧಿಗಳು. ಹಳ್ಳಿಗಳಿಂದ ಗಾಡಿಗಳಲ್ಲಿ ಜನರು ಬಂದರು. ಸಮಾರಾಧನೆ, ಸಂತರ್ಪಣೆ ನಡೆದವು. ತಮ್ಮ ಮೇಲೆ ಅಭಿಮಾನವಿರಬೇಕೆಂದು ಉಮೇದುವಾರರು ಕರಜೋಡಿಸಿ, ಶಿರಬಾಗಿಸಿ ನಮಿಸಿದರು. ಒಬ್ಬ ಉಮೇದುವಾರ ೫,೦೦೦ ರೂಪಾಯಿ ಖರ್ಚು ಮಾಡಿದ.

ಇನ್ನೊಬ್ಬ ೬,೨೦೦ ರೂಪಾಯಿ ಖರ್ಚು ಮಾಡಿದ. ೬,೨೦೦ ರೂಪಾಯಿ ಖರ್ಚು ಮಾಡಿದ ಮಹನೀಯರು ಆರಿಸಿ ಬಂದರು.

*    *    *    *

ಈತ ಮೈಸೂರಿಗೆ ಬಂದ. ಮೈಸೂರು ನೋಡಿದ ಕೂಡಲೇ ಅರ್ಧ ಪ್ರಾಣ ಹಾರಿತು. ಅಧಿವೇಶನ ೮-೧೦ ದಿನಗಳ ವರೆಗೆ ನಡೆಯಿತು. ಇವರಿಗೆ ಈ ಹೊಸ ವಾತಾವರಣ ಅಭ್ಯಾಸವಾಯಿತು. ಅಧಿವೇಶನದಲ್ಲಿ ಸುಖನಿದ್ರೆ ಬಂದ ಹಾಗೆ ಇನ್ನೆಲ್ಲಿಯೂ ಬರುವುದಿಲ್ಲೆಂದು ಅವರ ಅಭಿಪ್ರಾಯ. ಅಧಿವೇಶನಕ್ಕೆ ಬಂದ ಮೇಲೆ ಒಮ್ಮೆಯಾದರೂ ಮಾತನಾಡಬೇಕೆಂಬ ಆಶೆ ಅವರಲ್ಲಿ ಅಂಕುರವಾಯಿತು.

ಸಮಯವನ್ನು ಕಾಯುತ್ತಿದ್ದವರಿಗೆ ಅದು ದೊರಕಿತು ಹುಡುಕುವವನ ಹೊಸಲಿಗೆ ಬಂದಂತೆಯೇ ಎಂಬಂತೆ ಆ ರಸನಿಮಿಷ ಪ್ರಾಪ್ತವಾಯಿತು. ಅಧಿವೇಶನದಲ್ಲಿ ಕೆಲವು ಸದಸ್ಯರು ಮಾತನಾಡಲು ಗುತ್ತಿಗೆ ತೆಗೆದುಕೊಂಡಿದ್ದರು. ಒಬ್ಬರಂತೂ ಸ್ವಾತಿಮಳೆ ಹಿಡಿದ ಹಾಗೆ, ೩೪ ಇಂಚು ಗ್ರಾಮೊಫೋನ್ ರೆಕಾರ್ಡ್. ಸ್ವಲ್ಪದರೊಳಗೆ ಉಪಾಹಾರ ಸಮಯವಿತ್ತು. ಅಷ್ಟರಲ್ಲಿ ಗುತ್ತಿಗೆ ಭಾಷಣಕಾರ "ನಾನು ಈ ವಿಷಯದ ಮೇಲೆ ಇನ್ನೂ ಒಂದು ಗಂಟೆ ಕಾಲವಾದರೂ ಮಾತನಾಡಲು ಸಮರ್ಥನಿದ್ದೇನೆ. ನಾನು ಹೇಳಿದ್ದನ್ನು ಸ್ಪಷ್ಟೀಕರಿಸದಿದ್ದರೆ ಇತರ ಸದಸ್ಯರುಗಳಿಗೆ ಅರ್ಥವಾಗುವುದಿಲ್ಲ" ಎಂದರು. ಸ್ಫೂರ್ತಿಯೇ ಮೂರ್ತಿಮತ್ತಾಗಿ ನಿಂತಿತೋ ಎಂಬಂತೆ ನಮ್ಮ ಸದಸ್ಯರು ಎದ್ದು ಸಭೆಗೆ ವಂದಿಸಿ "ಮಹಾಸ್ವಾಮಿ ಲಂಚ್ ಟೈಮ್ ಆದಮೇಲೆ ಗಂಟೆಯೇಕೆ ಎರಡುಗಂಟೆ ಮಾತನಾಡಬಹುದು" ಎಂದರು. ನಗೆಯೊಂದಿಗೆ ಕರತಾಡನವೂ ಆಯಿತು. ನಮ್ಮ ಸದಸ್ಯರು ಈಗಲೂ ತಮ್ಮ ಮೈಸೂರಿನ ಅನುಭವದ ಗಂಟನ್ನು ಬಿಚ್ಚುವಾಗ ಈ ಪ್ರಕರಣವನ್ನು ಬಹು ಹೆಮ್ಮೆಯಿಂದ ಹೇಳುತ್ತಾರೆ. ಅಲ್ಲದೆ ಅವರು ಹೇಳುವ ಇನ್ನೊಂದು ವಿಷಯದಲ್ಲಿ ತಥ್ಯಾಂಶವಿದೆಯೆಂದು ನನಗೆ ತೋರುತ್ತದೆ. ಅವರು ಹೇಳುವುದೇನೆಂದರೆ "ಸದಸ್ಯರು, ಸುಮ್ಮನೆ ಗಂಟಲು ಒಣಗುವಂತೆ ಕೂಗಿ ಗಂಟೆಗಟ್ಟಲೆ ಮಾತನಾಡಿದರೆ

ಅಧ್ಯಕ್ಷರು ಮಾತ್ರ 'ಯೋಚಿಸುತ್ತೇವೆ, ಸಂದರ್ಭಕ್ಕೆ ಉಚಿತವಾದ್ದನ್ನು ಮಾಡುತ್ತೇವೆ, ನೋಡುತ್ತೇವೆ' ಎಂದು ಪ್ರತಿಪ್ರಶ್ನೆಗೂ ಉತ್ತರ ಕೊಡುತ್ತಾರೆ. ಆದರೆ ಹೇಳಿದ್ದೆಲ್ಲವನ್ನೂ ಮಾಡುತ್ತಾರೋ ಇಲ್ಲವೋ, ಅಂತೂ ವಾಗ್ದಾನಗಳಲ್ಲಿ ಕೆಲವು ವಾಗ್ದಾನಗಳಾಗಿಯೇ ಉಳಿಯುವುವು. ಕಂಠಶೋಷಣೆಯಿಂದ ಪ್ರಯೋಜನವಿಲ್ಲ; ಎಲ್ಲವೂ ಅರಣ್ಯರೋದನ" ಎಂದು ಹೇಳಿದರು.

*　　*　　*　　*

ಮೊದಲು ಮತದಾನದಲ್ಲಿ ಉಮೇದುವಾರರ ಹೆಸರಿನ ಮುಂದೆ ಗುಣಾಕಾರದ (X) ಚಿಹ್ನೆ ಹಾಕುತ್ತಿದ್ದರು. ಈಗ ಜನರ ನಿರಕ್ಷರತೆಯನ್ನು ಹೆಚ್ಚಿಸುವುದಕ್ಕೆ ನಾಯಿ, ಕತ್ತೆ, ಕೋತಿ, ದನ, ಕೆಲವು ಕೆಲಸಕ್ಕೆ ಬಾರದ ಪದಾರ್ಥಗಳು ಇವುಗಳ ಗುರುತನ್ನು ಮಾಡಿದ್ದಾರೆ. ಉಮೇದುವಾರರು ತಮಗೆ ಮತಗಳನ್ನು ಕೇಳದೆ "ಕುದುರೆಗೆ ನಿಮ್ಮ ಮತವನ್ನು ಹಾಕಿ" ಎಂದು ಕೇಳುತ್ತಾರೆ. ಇದಕ್ಕಿಂತಲೂ, ಹೆಚ್ಚಿನ ಮತ ದೊರೆಯಬೇಕೆನ್ನುವವರು ಕಸ ಹಾಕುವ ತೊಟ್ಟಿಯ ಗುರುತನ್ನು ಇಟ್ಟುಕೊಳ್ಳುವುದು ಒಳ್ಳೆಯದು. ಅಂದರೆ "ನಿಮ್ಮ ಘನವಾದ ಮತಗಳನ್ನು ತೊಟ್ಟಿಗೆ ಹಾಕಿರಿ" ಎಂದರೆ ಉಳಿದ ಮತಗಳೂ ನಿಮ್ಮವೇ ಆಗುವವು.

ಒಮ್ಮೆ ಈ ಗುರುತನ್ನು ಆರಿಸುವುದರಲ್ಲಿ ಒಂದು ಸಾರಿ ಹೆಚ್ಚು ಕಡಿಮೆ ಆಯಿತು. ಮಹಾಶಯರೊಬ್ಬರು ಉಮೇದುವಾರರಾಗಿ ನಿಂತರು. (ನಿಂತರೋ, ಕೂತರೋ ಯಾರಿಗೆ ಗೊತ್ತು) ಅವರ ಗುರುತು ಕುದುರೆಯದಾಗಿದ್ದಿತು. ಅವರು ಮಾಧ್ವರು. ಕುದುರೆಯ ಗುರುತೆಂದರೆ ಹಯಗ್ರೀವ ದೇವರೆಂತಲೂ, ದೇವರ ಪ್ರೇರಣೆಯಿಂದ ತಾವು ನಿಂತಿರುವುದಾಗಿಯೂ ಮತದಾರರಿಗೆ ಹೇಳಿದರು. ನಮ್ಮ ಊರಿನಲ್ಲಿ ಇದ್ದುದು ಒಂದೇ ಒಂದು ಮುದ್ರಣ ಪ್ರಿಂಟಿಂಗ್ ಪ್ರೆಸ್. ಅಲ್ಲಿ ಅಕ್ಷರಗಳು, ಬ್ಲಾಕ್‌ಗಳು, ಕಾಗದ ಇವು ಸಾಕಷ್ಟಿಲ್ಲದೆ ಉಳಿದ ಎಲ್ಲ ಸಾಮಗ್ರಿಗಳೂ ಇದ್ದವು. ಕುದುರೆ ಗುರುತಿನ ಉಮೇದುವಾರರು ತಮ್ಮ ಮುದ್ರಣ ಕೆಲಸವನ್ನು ಈ ಮುದ್ರಣಾಲಯಕ್ಕೆ ಒಪ್ಪಿಸಿದರು. ನಮ್ಮ ಕೆಲಸವೆಲ್ಲವೂ ಮುಗಿದ ಮೇಲೆ ಅಥವಾ ಮುಗಿಯುವ ಹೊತ್ತಿಗೆ ಮುದ್ರಣಾಲಯ

ದವರು ಕೆಲಸ ಮಾಡಿಕೊಡುವುದು ರೂಢಿಯಲ್ಲಿದೆ. ಅದರಂತೆ ಮತದಾನದ ದಿನವೂ ಈ ನ್ಯೂನತೆ ಕಂಡು ಬಂದು ಮುದ್ರಣ ಕೆಲಸವು ಅವಸರದಲ್ಲಿಯೇ ಆಗಿ ಅಂದೇ ಹಸ್ತಪತ್ರಿಕೆಗಳು, ಜಾಹೀರಾತಿನ ಪತ್ರಿಕೆಗಳು ಹೊರಬಿದ್ದವು. ಮುದ್ರಣಕಾರನು ತನ್ನ ಕಲೆ(ತಲೆ) ಯನ್ನೆಲ್ಲಾ ಉಪಯೋಗಿಸಿದ್ದನು. ಆದರೆ ಆ ಕುದುರೆಯ ಗುರುತು ಸಾಕಷ್ಟು ಚೆನ್ನಾಗಿ ಇರಲಿಲ್ಲ. ಕಿವಿಗಳು ಉದ್ದವಾಗಿದ್ದವು. ಕುದುರೆಯಾಕಾರ ಚಿಕ್ಕದಾಗಿ ಇತ್ತು. ನೋಡಿದೊಡನೆ ಅದು ಕುದುರೆಯಲ್ಲವೆಂದೂ, ಅದು ಹುಂ, ಹುಂ, ನಿಮ್ಮ ನಾಲಿಗೆಯ ತುದಿಯ ಮೇಲಿರುವ ಎರಡಕ್ಷರದ ಪ್ರಾಣಿಯಾಗಿದ್ದಿತು. ರಾಯರಿಗೆ ಮತಗಳು ಬೀಳಲಿಲ್ಲ. ಚುನಾವಣೆಯಲ್ಲಿ ಪರಾಜಿತರಾದರು ಆ ಗುರುತೇ ಈ ಅನರ್ಥಕ್ಕೆ ಕಾರಣವಾಯಿತೆಂದು ಇವರನ್ನು ಹುರಿದುಂಬಿಸಿದವರೂ, ಸ್ನೇಹಿತರೂ ಹೇಳಿದರು. ರಾಯರು ಮುದ್ರಣಾಲಯದ ಮಾಲೀಕರ ಮೇಲೆ .ಮಾನನಷ್ಟ ಹೂಡಿದ್ದಾರೆ. ಇನ್ನೂ ತೀರ್ಮಾನವಾಗಿಲ್ಲ. ನೋಡಬೇಕು.

* * * *

ಚುನಾವಣೆಯಲ್ಲಿ ಮುಖ್ಯವಾಗಿ ಬೇಕಾದುದು ಜಾಹೀರಾತು ಮತ್ತು ಪ್ರಚಾರ. ಈ ಬಗ್ಗೆ ಉಮೇದುವಾರರಿಗೆ ಕೆಲವು ಸೂಚನೆಗಳನ್ನು ಕೊಡಲು ಬಯಸುತ್ತೇನೆ ಸಂತೆ, ಜಾತ್ರೆ, ಪೇಟೆ ಇವುಗಳಲ್ಲಿ ನೀವು ಬೀಡಿ ಕಂಪೆನಿಗಳವರ ಪ್ರಚಾರಕಾರ್ಯವನ್ನು ನೋಡಿಲ್ಲವೇ? ಚಿಕ್ಕಚಿಕ್ಕ ಹುಡುಗರು ಕೋಡಂಗಿ ಟೋಪಿಯನ್ನು ಹಾಕಿಕೊಂಡು ದೊಡ್ಡಕ್ಷರದ ಭಿತ್ತಿಪತ್ರಿಕೆ ಅಂಟಿಸಿರುವ ಬಿದಿರು ತಟ್ಟೆಗಳನ್ನು ಹಿಡಿದುಕೊಂಡು ಹೋಗುತ್ತಾರೆ ಹುಡುಗರು "ಜಾಡಿ ಬೀಡಿ ಕೀ ಜೈ" ಅನ್ನುತ್ತಾರೆ. ಹಾಗೆಯೇ ಉಮೇದುವಾರರು ಚುನಾವಣಾ ಪಲ್ಲವಿಗಳನ್ನು ತಯಾರಿಸಿ ಹುಡುಗರಿಂದ ಹೇಳಿಸಬೇಕು. ದಪ್ಪಕ್ಷರದ ಭಿತ್ತಿಪತ್ರಿಕೆಗಳ ಮೇಲೂ ಈ ಶ್ಲೋಕಗಳಿರಬೇಕು. ಉದಾಹರಣೆಗೆ :—

ಒಬ್ಬ :—ಯಾರಿಗೋಟ್ ಕೊಡ್ಬೇಕು ?

ಎಲ್ಲರೂ :—ರಾಯರಿಗೋಟ್ ಕೊಡ್ಬೇಕು !

ಒಬ್ಬ :—ರಾಯರೇನ್ಮಾಡ್ತಾರೆ ?
ಎಲ್ಲರೂ :—ರಸ್ತೆ ಸರಿಮಾಡ್ತಾರೆ !
ಒಬ್ಬ :— ಮತ್ತೇನ್ಮಾಡ್ತಾರೆ ?
ಎಲ್ಲರೂ :—ಕಾನೂನೆಲ್ಲ ತಿದ್ತಾರೆ !
ಒಬ್ಬ : — ಇನ್ನೇನ್ಮಾಡ್ತಾರೆ ?
ಎಲ್ಲರೂ ;—ಬೇಕಾದ್ ಮಾಡ್ತಾರೆ !

ಈ ತರಹೆಯ ಪ್ರಚಾರದಿಂದ ಉಮೇದುವಾರನ ಧ್ಯೇಯ ಧೋರಣೆಗಳು, ಇವನು ಮಾಡಲಿರುವ ಕೆಲಸಗಳು ಜನರಿಗೆ ತಿಳಿಯುವುವು. ಮತ್ತು ಚುನಾವಣೆಯ ದಿವಸ ಮತದಾರರನ್ನು ಬೇರೆಯುವರು ಚುನಾವಣೆ ಮಾಡದಂತೆ ಒಬ್ಬೊಬ್ಬ ಮತದಾರನಿಗೆ ಇಬ್ಬರು ಜಟ್ಟಿಗಳನ್ನು ನಿಯಮಿಸಬೇಕು. ಆ ಜಟ್ಟಿಗಳು ಮತದಾರನ ರಟ್ಟೆ ಹಿಡಿದುಕೊಂಡು ವಧಸ್ಥಾನಕ್ಕೆ ತೆಗೆದುಕೊಂಡು ಹೋಗುವ ಪಶುವಿನಂತೆ ಕರೆದೊಯ್ಯಬೇಕು. ಇಲ್ಲದಿದ್ದರೆ "ನನಗೆಲ್ಲಾ ಗೊತ್ತಿದೆ, ಬಿಡಿ" ಎಂದು ಹೇಳುತ್ತಾ ಮೂಗಿಗೆ ತುಪ್ಪ ಹಚ್ಚಿ ಬೇರೆಯವರಿಗೆ ಕೊಟ್ಟುಬಿಡುತ್ತಾರೆ ಎಲ್ಲ ಉಮೇದುವಾರರ ಹತ್ತಿರ ಹಣ ತೆಗೆದುಕೊಂಡು ಕಾಫಿ ತಿಂಡಿ ಹೊಡೆದು ಹುಸಿನಗೆ ಬೀರುತ್ತಾ ತಿರುಗಾಡುವವರನ್ನು ಎಂದಿಗೂ ನಂಬಬೇಡಿ.

ಗುರುತುಗಳನ್ನು ಆರಿಸುವವರು ತಮ್ಮ ತಮ್ಮ ಕಸುಬನ್ನು ತೋರಿಸುವಂತಿದ್ದರೆ ಒಳಿತಲ್ಲವೇ ? ಕುಂಬಾರನು ಮಡಕೆ, ಚಿಪ್ಪಿಗನು ಹೊಲಿಯುವ ಯಂತ್ರ, ಲೇಖಕರು ಲೇಖನಿ, ಹಜಾಮರು ಕತ್ತಿ, ಅಗಸರು ಕತ್ತೆ, ವ್ಯಾಪಾರಸ್ಥರು ತಕ್ಕಡಿ, ಹೋಟೆಲಿನವರು ಸವಟು ಇತ್ಯಾದಿ, ಹೀಗೆ ಗುರುತುಗಳನ್ನು ಆರಿಸಿಕೊಂಡರೆ ಮತದಾರರಿಗೆ ಸರಿಯಾಗಿ ಅರ್ಥವಾಗುತ್ತೆ. ಅವರಿಂದ ನಾವು ಏನನ್ನು ನಿರೀಕ್ಷಿಸಬಹುದೆಂಬುದಕ್ಕೆ ಅವರ ಗುರುತುಗಳು ರನ್ನಗನ್ನಡಿಯಂತಿರುತ್ತವೆ.

# ರೇಷನ್ ಕಾರ್ಡು

“ಸರ್ವಂ ರೇಷನ್‌ಮಯಂ ಜಗತ್” ಎಂಬುದು ಈಗ ನಮ್ಮ ಜೀವನ ದಲ್ಲಿ ಅಕ್ಷರಶಃ ನಿಜವಾಗಿದೆ. ನಮ್ಮ ನಿತ್ಯೋಪಯೋಗಿ ಹಾಗೂ ವಿಲಾಸ ಮತ್ತು ಮನರಂಜನೆಯ ಪದಾರ್ಥಗಳು ಸಹ ರೇಷನ್ ಕಟಕಟಿಯಲ್ಲಿ ಸಿಕ್ಕಿ ಕೊಂಡಿವೆ. ಒಂದು ರೂಪಾಯಿನ ಅಕ್ಕಿಯನ್ನೋ, ಮೂರು ಗಜ ಬಿನ್ನಿ ಬಟ್ಟೆಯನ್ನೋ, ಕ್ಯೂ ನಿಂತು ತಂದಾಗ – ತಂದವನ ಮುಖ ನೋಡಬೇಕು. ಹುಣ್ಣಿಮೆಯ ಚಂದ್ರನಷ್ಟು ಅಗಲವಾಗಿರುತ್ತದೆ ಅದು. ಅವನ ಸಂತೋಷ, ಅಟ್ಟಹಾಸಕ್ಕೆ ಪಾರವೇ ಇಲ್ಲ. ಮೂರು ರಾಜ್ಯ ಗೆದ್ದ ಹಾಗಿರುತ್ತೆ ಅವನ ಮುಖಮುದ್ರೆ.

ಪ್ರಕೃತಿ ದತ್ತವಾದ ಗಾಳಿ, ಬೆಳಕು, ನೀರೂ ಸಹ ರೇಷನ್ ವಿಧಾನ ದಲ್ಲಿ ಅಳವಡಿಸಲ್ಪಟ್ಟವೆಯೆಂದರೆ ನಿಮಗೆ ಆಶ್ಚರ್ಯವಾಗದಿರದು. ನೀರಿಗೆ ಮೀಟರ್ ಹಚ್ಚಿದ್ದಾರೆ. ಗಾಳಿ ಬೇಕಾದರೆ ಊರಾಚೆ ಹೋಗಬೇಕು. ಇಲ್ಲವಾದರೆ ಎಲೆಕ್ಟ್ರಿಕ್ ಫ್ಯಾನ್ ತಿರುಗಿಸಬೇಕು. ದೊಡ್ಡ ಕಟ್ಟಡಗಳ ಮನೆಗಳ ಸಂದು ಕಿಂಡಿಗಳ ಮೂಲಕ ಅದು ಫಿಲ್ಟರ್ ಆಗಿ ನಮ್ಮ ಮೂಗು ಬಾಯಿ ಗಳಿಗೆ ಬರಬೇಕು. ಸುತ್ತಲೂ ಆಕಾಶವನ್ನು ಮುತ್ತಿಕ್ಕುವಂತಹ ರಾಕ್ಷಸ ಕಟ್ಟಡಗಳು. ನಾವು ಬೆಳಕು ಕಾಣುವುದೆಂತು. ಹಗಲು ಹೊತ್ತಿನಲ್ಲಿಯೇ ಎಲೆಕ್ಟ್ರಿಕ್ ದೀಪ ಹಚ್ಚಿಕೊಳ್ಳಬೇಕು.

ನಮ್ಮ ಜೀವನ ಸುಗಮವಾಗಿ ಸಾಗಿಸುವ ಪ್ಯಾಸ್‌ಪೋರ್ಟ್ ಎಂದರೆ

ರೇಷನ್ ಕಾರ್ಡು. ಈ ಹಿಟ್ಟಿನ ಚೀಟಿ ಇಲ್ಲದಿದ್ದರೆ ನಮ್ಮ ಬಾಳು ಬೇರೆ ಬೇಯುವುದಿಲ್ಲ. "ಅನ್ನದಾತಾ ಸುಖೀಭವ" ಎಂಬುದು ನ್ಯಾಯವಾಗಿ ರೇಷನ್ ಕಾರ್ಡಿನಲ್ಲಿರುತ್ತೆ "ಪುಸ್ತಕಂ ವನಿತಾ ವಿತ್ತಂ ಪರಹಸ್ತೇನ ಗತಂ ಗತಂ" ಎಂಬುದಕ್ಕೆ ರೇಷನ್ ಕಾರ್ಡನ್ನು ಸಹ ಲಗತ್ತಿಸಬೇಕು ರೇಷನ್ ಕಾರ್ಡನ್ನು ಮತ್ತು ಬಟ್ಟೆಯ ಕೂಪನ್ನನ್ನು ಯಾರಾದರೂ ಬೇರೆಯವರ ಕೈಗೆ ಕೊಟ್ಟರೆ ಅದು ಮತ್ತೆ ವಾಪಸು ಬರುವುದೂ ಸಾಮಾನ್ಯವೇ. ಸಾಧ್ಯವಾದ ಮಟ್ಟಿಗೆ ಅದರ ಉಪಯೋಗ ಅಥವಾ ದುರುಪಯೋಗ ಮಾಡಿಕೊಂಡೇ ವಾಪಸು ಮಾಡಿರುತ್ತಾರೆ.

ಕ್ಷಾಮ ಪೀಡಿತ ಹಳ್ಳಿಗಳಲ್ಲಿ ಒಂದು ಸಾರಿ ಪ್ರವಾಸ ಹೊರಟಿದ್ದೆ. ರೇಷನ್ ಕಾರ್ಡುಗಳ ಪರಿಶೀಲನೆ ಮಾಡಿದೆ. ಹಳ್ಳಿಯವನೊಬ್ಬ ಹೇಳಿದ: "ಸ್ವಾಮೀ ನನಗೆ ಕೌಪೀನ ಕೊಟ್ಟಿಲ್ಲ" ಎಂದ. ಕೂಪನ್ ತದ್ಭವವಾಗಿ ಹೀಗೆ ಅಷ್ಟಾವಕ್ರವಾಗಿದೆಯೆಂದು ಗ್ರಹಿಸಿದೆ. ಅಲ್ಲದೆ ಕೌಪೀನವು ಮಾನ ಮುಚ್ಚಲು ಹೇಗೆ ಸಹಾಯಕವಾಗುತ್ತದೋ ಹಾಗೆಯೇ ನಮ್ಮ ಹೊಟ್ಟೆಯ ಮಾನ ಅದು ಉಳಿಸುತ್ತೆ. ಇನ್ನೊಬ್ಬ ಹಳ್ಳಿಯವ: "ಸ್ವಾಮೀ ನಮಗೆ ಟೋಪನ್ ಕೊಟ್ಟಿಲ್ಲ" ಅಂದ. ಇದು ಕೂಪನ್ನಿನ ಇನ್ನೊಂದು ರೂಪಾಂತರ. ಬಿಟ್ಟ ತಲೆಯನ್ನು ಟೋಪನ್ ಹೇಗೆ ಯಶಸ್ವಿಯಾಗಿ ಮುಚ್ಚುವುದೋ ಈ ಕೂಪನ್ ಸಹ ಹಸಿದ ಹೊಟ್ಟೆಯನ್ನು ಮುಚ್ಚುತ್ತೆ.

ಅಪರಾಧಿಯೊಬ್ಬನು ಏನೋ ತಪ್ಪು ಮಾಡಿದ. ಅದು ಅವನು ಮಾಡಿದ ಹದಿನೆಂಟನೆಯ ಅಪರಾಧ. ಅವನಿಗೆ ಯಾವ ಶಿಕ್ಷೆಯನ್ನು ವಿಧಿಸಬೇಕೆಂದು ನ್ಯಾಯಾಧೀಶರು ಯೋಚಿಸಿ, ಕೊನೆಗೆ ಅವನ ರೇಷನ್ ಕಾರ್ಡು ತರಿಸಿ ಹರಿಸಿ ಹಾಕಿದರಂತೆ. ಇದಕ್ಕಿಂತ ಕಠಿಣಶಿಕ್ಷೆ ಬೇರೊಂದಿಲ್ಲವೆಂಬುದು ಅವರಿಗೆ ಗೊತ್ತು.

ಒಬ್ಬ ಬಾವಿ ಕಟ್ಟೆಯ ಮೇಲೆ ಕುಳಿತುಕೊಂಡು ಅಳುತ್ತಿದ್ದ. ಅವನು ಅಳುವುದನ್ನು ಸಮಾಧಾನಪಡಿಸುವುದು ಸಾಕುಸಾಕಾಯಿತು. ಏನೇ ಮಾಡಿದರೂ ಬಾವಿಯೊಳಕ್ಕೇ ಇಣಿಕಿ ನೋಡುತ್ತಿದ್ದ. "ಅಯ್ಯಾ ನಿನಗೆ ಆಗಿರುವು

ದಾದರೂ ಏನು ? ಏಕೆ ಹೀಗೆ ಬಾವಿಯೊಳಕ್ಕೆ ಇಣಿಕಿ ನೋಡುತ್ತಿದ್ದೀಯಾ ?" ಅಂತ ಕೇಳಿದಾಗ "ಸ್ವಾಮೀ ನನ್ನ ರೇಷನ್ ಕಾರ್ಡ್ ಈ ಬಾವಿಯೊಳಕ್ಕೆ ಬಿದ್ದುಹೋಗಿದೆ" ಎಂದು ಬಿಕ್ಕಿಸಿ ಬಿಕ್ಕಿಸಿ ಅಳತೊಡಗಿದ.

ಆಧುನಿಕ ಯುಗದ ಮಹಾ ಸುಳ್ಳೆಂದರೆ ಲಗ್ನಪತ್ರಿಕೆಗಳಲ್ಲಿ ಸಣ್ಣಕ್ಷರದಲ್ಲಿ "ನಿಮ್ಮ ರೇಷನ್ ತೆಗೆದುಕೊಂಡು ಬನ್ನಿ" ಅಂತ ಅಚ್ಚು ಹಾಕಿರುತ್ತಾರೆ. ಮದುವೆ ಮನೆಗೆ ಹೋಗುವವರ್‍ಯಾರಾದರೂ ಅಕ್ಕಿ, ಸಕ್ಕರೆ, ರವೆ, ಸೀಮೆಎಣ್ಣೆ ಗಂಟುಕಟ್ಟಿಕೊಂಡು ಹೋಗುವುದು ಉಂಟೆ ? ಏನೋ ಲಕ್ಷಣವಾಗಿ ಕವಳ ಕತ್ತರಿಸಿ ಬರಲು ಹೋಗಿರುವ ಮಹನೀಯರು ಸುಧಾಮ ಕೃಷ್ಣನ ಮನೆಗೆ ಅವಲಕ್ಕಿ ತೆಗೆದುಕೊಂಡು ಹೋದಂತೆ ರೇಷನ್ ತೆಗೆದುಕೊಂಡು ಹೋಗುವುದು ಉಂಟೆ ? ವೇಶ್ಯೆಯ ಮನೆಗೆ ಹೋಗುವವರು ಹಾಸಿಗೆಸುರುಳಿಯನ್ನು ಕಂಕುಳಲ್ಲಿ ಇರುಕಿಕೊಂಡು ಹೋಗುತ್ತಾರೆಯೇ ?

* * * *

ರೇಷನ್ ಕಾರ್ಡ್ ಬಗ್ಗೆ ಕೊರವಂಜಿಯಲ್ಲಿ ಒಂದು ಹಾಸ್ಯದ ಚಟಾಕಿ ಪ್ರಕಟವಾಗಿತ್ತು. ಒಬ್ಬರ ಮುಖ ಬಹಳ ಸಪ್ಪೆಯಾಗಿರುತ್ತೆ. ಇನ್ನೊಬ್ಬರು ಅವರನ್ನು ಕೇಳುತ್ತಾರೆ: "ಯಾಕೆ ಸ್ವಾಮೀ ನಿಮ್ಮ ಮುಖ ಸಪ್ಪಗಿದೆ?" ಅಂತ. ಅದಕ್ಕೆ ಅವರು: "ನನ್ನ ಕಡೆಯ ಮಗ ಹೋದ ಶುಕ್ರವಾರ ಅಕ್ಕಿ ತರಲು ರೇಷನ್ ಕಾರ್ಡು ತೆಗೆದುಕೊಂಡು ಹೋದವನು ಇನ್ನೂ ಬಂದೇ ಇಲ್ಲ". ಮಗು ಹೋದ ಯೋಚನೆಗಿಂತ ರೇಷನ್ ಕಾರ್ಡ್ ಹೋದ ಯೋಚನೆಯೇ ಅವರಿಗೆ ಹೆಚ್ಚಾಗಿತ್ತು.

ಮನೆಯಲ್ಲಿ ರೇಷನ್ ಕಾರ್ಡಿಗೆ ಎಲ್ಲಿಲ್ಲದ ಮರ್ಯಾದೆ. ಭಗವದ್ಗೀತೆ, ಪಾರಾಯಣದ ಪುಸ್ತಕಗಳು ಎಲ್ಲಿಯೋ ಬಿದ್ದಿರುತ್ತವೆ. ಆದರೆ ರೇಷನ್ ಕಾರ್ಡನ್ನು ಬಹು ಜೋಪಾನವಾಗಿ ಗೂಡಿನಲ್ಲೋ ಅಥವಾ ಯಾವುದಾದರೂ ಗೊತ್ತಾದ ಸ್ಥಳದಲ್ಲೋ ಇಟ್ಟಿರುತ್ತಾರೆ. ಅದರ ಮೇಲೆ ಮನೆಮಂದಿಗೆಲ್ಲಾ ನಿಗ. ಅದಕ್ಕೆ ಕ್ಯಾಲಿಕೋ ಬೈಂಡ್ ಹಾಕಿ ಕೆಲವರೂ, ದಪ್ಪ ರಟ್ಟು ಹಾಕಿ ಕೆಲವರೂ ಸನ್ಮಾನಿಸಿರುತ್ತಾರೆ.

ರೇಷನ್ ಸೆನ್ಸಸ್ ಆರಂಭವಾದ ಕೂಡಲೇ ಎಲ್ಲಿಲ್ಲದ ನೆಂಟರಿಗೆ ಕಾಗದ ಬರೆದು ಮನೆಗೆ ಕರೆಸಿಕೊಂಡಿರುತ್ತಾರೆ. ಏನೋ ಒಂದೆರಡು ಹೆಸರು ಹೆಚ್ಚಾಗಿ ಸೇರಲೆಂದು. ಮನೆಯ ಮಾಲೀಕನಿಗೂ ಇತರರಿಗೂ ಇರುವ ಸಂಬಂಧ ಪಟ್ಟಿ ಬಹು ಸ್ವಾರಸ್ಯವಾಗಿರುತ್ತದೆ. "ಭಾವಮೈದುನನ ಅತ್ತೆ ಸೋದರಳಿಯನ ತಮ್ಮನ ಮೊಮ್ಮಗ" ಅಂತ ಬರೆದರೆ ಆ ಸೆನ್ಸಸ್ ಅಧಿಕಾರಿಗೆ ಅರ್ಥ ವಾದರೂ ಹೇಗಾದೀತು ? ಊರಿನ ಜನಸಂಖ್ಯೆ ಪುಸ್ತಕದಲ್ಲಿ ಹೆಚ್ಚಾಗಲು ಸಹ ರೇಷನ್‌ಗಾಗಿ ಸುಳ್ಳು ಲೆಕ್ಕ ಕೊಟ್ಟಿದ್ದರಿಂದಲೇ ಅಂತ ತಿಳಿದುಬಂದಿದೆ.

ರೇಷನ್ ಕಾರ್ಡ್ ಇದ್ದ ಮಾತ್ರಕ್ಕೆ ಅದರಲ್ಲಿ ಬರೆದಿರುವ ಸಾಮಾನು ಗಳು, ಬರೆದಷ್ಟೇ ಪ್ರಮಾಣಗಳಲ್ಲಿ ದೊರೆಯುತ್ತದೆಯೆಂದು ತಿಳಿಯಬೇಡಿ. ಅದಕ್ಕೂ ಅದೃಷ್ಟ ಬೇಕು. ರೇಷನ್ ಗುಮಾಸ್ತೆಯ ಒಲವು ಆಸರಗಳನ್ನು ನಾವು ಅನುಸರಿಸಬೇಕು. ರೇಷನ್ ಡಿಪಾರ್ಟ್‌ಮೆಂಟಿಗೆ ವರ್ಗವಾದ ಅಧಿ ಕಾರಿಗಳ ಮತ್ತು ಗುಮಾಸ್ತೆಯರ ಅದೃಷ್ಟ ಹೇಳತೀರದು. ಕಾರ್ಡುಗಳನ್ನು ವಿಲೆಮಾಡುವಾಗ ಅಡಕಿರುವ ರಾಜಕೀಯ ರಹಸ್ಯವು ಅಷ್ಟಿಷ್ಟಲ್ಲ. ಈ ಕಾರ್ಡುಗಳೂ ಕೂಡ ಅಮಾವಾಸ್ಯೆ ಸಂತೆಯಲ್ಲಿ ವಿಜೃಂಭಿಸುತ್ತವೆ.

ರೇಷನ್ ಕಾರ್ಡ್ ತೆಗೆದುಕೊಂಡು ಹೋದ ಮಾತ್ರಕ್ಕೆ ಅತ್ಯುತ್ತಮ ವಾದ ಪದಾರ್ಥಗಳೇ ದೊರೆಯುತ್ತವೆಂದು ತಿಳಿಯಬೇಡಿ. ತಿಂಗಳಿಗೆ ಎಂಟು ತರಹೆ ಅಕ್ಕಿ. ಅವುಗಳ ಗಾತ್ರ ಹೆಚ್ಚು ಕಡಿಮೆ ಆದಂತೆ ಬಣ್ಣ, ರುಚಿ ಇವು ಸಹ ವ್ಯತ್ಯಾಸವಾಗಿರುತ್ತವೆ. ಒಂದೊಂದು ಸಾರಿ ಅತೀ ಕೆಟ್ಟ ಅಕ್ಕಿ ಸಹ ಬರುವುದುಂಟು. ಮೇಷ್ಟರೊಬ್ಬರ ತಂದೆ ತೀರಿದರು. ಮೇಷ್ಟರು ಆ ಕೂಡಲೇ ರೇಷನ್ ಅಧಿಕಾರಿಯನ್ನು ತಮ್ಮ ಮನೆಗೆ ಕರೆತಂದರು. ಹೆಣದ ಬಾಯಿಯಲ್ಲಿ ಅಕ್ಕಿ ಎಳ್ಳನ್ನು ಹಾಕಿದಾಗ ಅಕ್ಕಿ ಕೆಟ್ಟದಾಗಿದ್ದರಿಂದ ಹೆಣ ಅದನ್ನು ಉಗುಳಿ ತೆಂಬುದನ್ನು ಅಧಿಕಾರಿಗೆ ತೋರಿಸಿದರು. ಅದನ್ನು ನೋಡಿದ ಅಧಿಕಾರಿ ಬೇರೆ ಒಳ್ಳೆಯ ಅಕ್ಕಿ ಕೊಟ್ಟನಂತೆ.

ಈಗ ಬಂದಿರುವ ಮುಷುಕಿನಜೋಳ ಪ್ರಾಚೀನಕಾಲದ ಯಾವುದೋ

ಪ್ರಾಣಿಯ ಹಲ್ಲುಗಳಿದ್ದ ಹಾಗಿರುತ್ತದೆ ಅದು. ಅವನ್ನು ನಾವು ತಿನ್ನುವುದು ಹೇಗೆ? ತಿಂದರೆ ಹೊಟ್ಟೆ ಉಳಿಯುತ್ತೆ?

ರೇಷನ್ ಯುಗ ಆರಂಭವಾದ ಮೇಲೆ ಕಾಷ್ಟಾವ್ಯಸನವೂ ಅದರ ಜೊತೆಗೇ ತಲೆದೋರಿತು. ಸೌದೆಗೆ ಸಹ ಕಾರ್ಡು ಏರ್ಪಟ್ಟಿತು. ಜನ ಕಟ್ಟಿಗೆಗಾಗಿ ಕಷ್ಟಪಡುವುದನ್ನು ನಾಡಿಗೇರರು ನೋಡಲಾರದೆ ತಾವು ತುಲಾ ಭಾರ ತೂಗಿಸಿಕೊಂಡ ಸಮಯದಲ್ಲಿ ಬರೀ ಕಟ್ಟಿಗೆಯನ್ನೇ ತೂಗಿಸಿಕೊಂಡು ಅದನ್ನು ದಾನಮಾಡಿದರಂತೆ.

ಸೌದೆ ಅಭಾವ ಬಹಳ ಹೆಚ್ಚಾದ ಕಾಲದಲ್ಲಿ ಒಂದು ಮುದುಕಿ ಇನ್ನೇನು ಈಗಲೋ ಆಗಲೋ ಸಾಯುವಂತಿದ್ದಳು. ಮುದುಕಿಯ ಮಕ್ಕಳು ಆಕೆಯ ಹಾಸಿಗೆಯ ಪಕ್ಕದಲ್ಲಿ ಕುಳಿತು ಕಟ್ಟಿಗೆ ಅಭಾವದ ವಿಚಾರ ತಿಳಿಸಿದರು. ಮುದುಕಿ ಆಗಲೇ ತಟ್ಟನೆ ಎದ್ದು ಕುಳಿತಳು. ಸಾಯುವ ಹವ್ಯಾಸವನ್ನೇ ಬಿಟ್ಟಳು.

ಹೀಗಿದೆ ಈ ರೇಷನ್ ಕಥೆ. ಇದಕ್ಕೆ ಮೂಲಸೂತ್ರ ಕಾರ್ಡುಗಳು. ಇವುಗಳನ್ನು ಜೋಪಾನವಾಗಿಟ್ಟುಕೊಳ್ಳಿ. ಇಲ್ಲದಿದ್ದರೆ ನಿಮ್ಮ ಜೀವನ ಸೂತ್ರವೇ ಹರಿದುಹೋಗುತ್ತೆ.

# ಜಾಹೀರಾತಿನ ಜಗತ್ತು

ಈ ಯುಗಕ್ಕೆ ವಿಜ್ಞಾನಯುಗವೆಂತಲೂ, ಯಂತ್ರಯುಗವೆಂತಲೂ, ಸ್ವಾತಂತ್ರ್ಯಯುಗವೆಂತಲೂ ಇನ್ನೂ ಅನೇಕ ಹೆಸರುಗಳನ್ನು ಕೊಟ್ಟಿದ್ದಾರೆ. ಕಲಿಯುಗ ಎಂತೆನ್ನುವುದಕ್ಕೆ ಯಾವ ಅಭ್ಯಂತರವೂ ಇಲ್ಲ. ಆದರೆ ಬೆಂಗಳೂರು ನಗರದಂತಹ ದೊಡ್ಡ ನಗರದ ಮಾರ್ಕೆಟ್ ಅಥವಾ ಯಾವುದಾದರೂ ವ್ಯಾಪಾರಕೇಂದ್ರ ಪ್ರದೇಶದಲ್ಲಿ ನಾವು ಎಲ್ಲಿಯಾದರೂ ಮೂಲೆಯಲ್ಲಿ ಸ್ವಲ್ಪ ನಿಂತುಕೊಂಡರೆ (ಇಲ್ಲದಿದ್ದರೆ ಒಂದಕ್ಕಿಂತ ಹೆಚ್ಚು ಮೋಟಾರುಗಳು ಮೈಮೇಲೆ ಹರಿದುಹೋಗುವವು) ಈ ಯುಗಕ್ಕೆ ಜಾಹೀರಾತಿನ ಯುಗವೆಂದು ಆಣೆಯಿಟ್ಟುಕೊಂಡು ಹೇಳಬಹುದು.

ಮನುಷ್ಯನ ಉಪಯೋಗಕ್ಕೆ ಬೇಕಾಗುವ ಹಾಗೂ ಬೇಡಾಗುವ ಪ್ರತಿಯೊಂದು ಪದಾರ್ಥವೂ ಭಿತ್ತಿಪತ್ರಿಕೆಗಳ ಮೂಲಕ, ಹಸ್ತಪತ್ರಿಕೆಗಳ ಮೂಲಕ, ವರ್ತಮಾನಪತ್ರಿಕೆ, ಸಿನಿಮಾ ಸ್ಲೈಡ್ ಮತ್ತು ಇನ್ನೂ ಅನೇಕ ಸಾಧನಗಳಿಂದ ಪ್ರದರ್ಶಿಸಲ್ಪಡುತ್ತವೆ.

ಒಂದು ಸಾರಿ ನಮ್ಮ ಅಜ್ಜಿಯೊಂದಿಗೆ ಸಿನಿಮಾಕ್ಕೆ ಹೋಗಿದ್ದೆ. ಆ ದಿವಸ ಶಿವರಾತ್ರಿ. ಸತ್ಕಾಲಕ್ಷೇಪವನ್ನು ಮಾಡಲೋಸುಗ "ವೆಂಕಟೇಶ ಮಹಾತ್ಮ್ಯಂ" ಫಾಕ್ಚರಕ್ಕೆ ಕರೆದುಕೊಂಡು ಹೋದೆನು. ಚತುರ್ಭುಜನಾದ ವೆಂಕಟೇಶಸ್ವಾಮಿಯು ಪ್ರತ್ಯಕ್ಷನಾದಾಗ ಅಜ್ಜಿ ಕುಳಿತಲ್ಲಿಂದ ಕೈ ಮುಗಿದು ಗಲ್ಲಗಲ್ಲ ಬಡಿದುಕೊಂಡು ದೇವರದರ್ಶನವಾಗಿ ಉದ್ಧಾರವಾದೆನೆಂದು ಹೇಳಿದಳು. ಕಾಯಿ ಕರ್ಪೂರಗಳನ್ನು ನಾನು ತರಲಿಲ್ಲವೆಂದು ವಿಪರೀತವಾಗಿ

ತ್ತಿದಳು. ಪಿರಾವು ಸಮಯವಾದ ಸ್ವಲ್ಪ ಹೊತ್ತಿನಮೇಲೆ ಜಾಹೀರಾತು ಗಳನ್ನು ಹಾಕಲಾರಂಭಿಸಿದರು. ಒಬ್ಬ ಕೋಮಲಾಂಗಿಯು (ಕವಿಗಳು ಭಾವನಾಪರವಶರಾದಾಗ ವರ್ಣಿಸುತ್ತಾರಲ್ಲ ಅಥವ) ಎಡಗೈಯಲ್ಲಿ ನಾಲ್ಕು ಕಟ್ಟು, ಬಲಗೈಯಲ್ಲಿ ನಾಲ್ಕು ಕಟ್ಟು ಜಾಡೀಬೀಡಿ (ಅಸಲ್) ಹಿಡಿದಿದ್ದಳು. ಬಾಯಲ್ಲೊಂದು; ಹೊಗೆಯುಗುಳುವ ಒಂದು ಬೀಡಿ ತುಟಿಯ ತುದಿಯಲ್ಲಿ. ಅಜ್ಜಿ ಗೋಹತ್ಯ, ಬ್ರಹ್ಮತ್ಯ ಮುಂತಾದ ಪಂಚಮಹಾಪಾತಕಗಳನ್ನು ಮಾಡಿ ದುದಕ್ಕಿಂತ ಮಿಗಿಲಾದ ಪಾಪವನ್ನು ಮಾಡಿದೆನೆಂದು ಭಾವಿಸಿ, ನನ್ನನ್ನು ಸಿನಿಮಾದಲ್ಲಿ ಕೂಡಗೊಡಿಸದೆ ಎಳೆದುಕೊಂಡು ಹೋದಳು. ಮನೆಗೆ ಹೋಗಿ ಸ್ನಾನ ಮಾಡಿ ದೇವರ ಮುಂದೆ ತುಪ್ಪದ ದೀಪ ಹಚ್ಚಿ ಮಲಗಿಕೊಂಡಳು. ಅಜ್ಜಿ ಸನಾತನಿ ಯುಗದವಳೆಂತಲೂ, ಜಾಹೀರಾತಿನ ಯುಗಕ್ಕೆ ಸೇರಿದವಳಲ್ಲ ವೆಂತಲೂ ಸುಮ್ಮನಾದೆ.

ನಾನೂ ನನ್ನ ಸ್ನೇಹಿತ ರಾಜನೂ ಒಂದು ಪೆಟ್ರೋಲ್ ಷೆಡ್ಡಿಗೆ ಹೋದೆವು. ರಾಜ ಮಾತನಾಡುತ್ತ ಸಿಗರೇಟ್ ಪ್ಯಾಕ್ ತೆಗೆದು ಸಿಗರೇಟ್ ಹಚ್ಚಿದ. ಪೆಟ್ರೋಲ್ ಷೆಡ್ಡಿನ ಮಾಲೀಕನು ಆರ್ಭಟಿಸುತ್ತ ರಾಜನನ್ನು ಕುರಿತು "ಏನ್ರೀ ನಿಮಗೆ ಬುದ್ಧಿಯಿಲ್ಲವೇ? ಪೆಟ್ರೋಲ್ ಷೆಡ್ಡಿನಲ್ಲಿ ಸಿಗರೇಟ್ ಹಚ್ಚುತ್ತೀರಲ್ಲ? ಅಲ್ಲಿ ನೋಡಿ 'ಧೂಮಪಾನ ಕೂಡದು' ಅಂತ ಬೋರ್ಡು ಇದೆ. ಕಾಣುವುದಿಲ್ಲವೆ?" ಎಂತ ಮುಂಗಾರುಗುಡುಗು ನಾಚು ವಂತೆ ಗುಡುಗಿದ. ರಾಜ, "ಲಾಭಾ ಲಾಭೌ, ಜಯಾ ಜಯೌ" ಎಲ್ಲವೂ ಸಮನೆಂದು ಭಾವಿಸುವ ಕರ್ಮಯೋಗಿಯಂತೆ ಗಂಭೀರವಾಗಿ "ಅಲ್ಲಿ ನೋಡಿ ಅದೇನು?" ಎಂದ. ಮಾಲೀಕ ತಿರುಗಿದ. ಒಂದು ದೊಡ್ಡ ಭಿತ್ತಿಪತ್ರಿಕೆ. ಅದರ ಮೇಲೆ, "ವಿಲ್ಸ್ ಸಿಗರೇಟ್ ಸೇದಿ" ಅಂತ ಇತ್ತು. ರಾಜ ತನ್ನ ಸಿಗರೇಟ್ ಪ್ಯಾಕ್ ತೋರಿಸಿದ. ಅದು ವಿಲ್ಸ್ ಪ್ಯಾಕ್ ಆಗಿತ್ತು. ಸಿಟ್ಟು ಹೊಟ್ಟೆಯಲ್ಲಿ ತುಂಬಿ, ಬಾಯಲ್ಲಿ ಹೆಚ್ಚಾಗಿ ಬಂದುದರಿಂದ ಮಾಲೀಕ ಮಾತ ನಾಡಲಿಲ್ಲ. ಅವನ ಮಾತುಗಳನ್ನು ಕೇಳುವಷ್ಟು ನಾವು ಕಾತುರರಾಗಿರಲಿಲ್ಲ. ಹಾಗೆಯೇ ಹೊರಕ್ಕೆ ಬಂದೆವು.

ರಾಜ ಸಿನಿಮಾ ನೋಡಿ, ಇಂಗ್ಲಿಷ್ ಕಾದಂಬರಿಗಳನ್ನು ಓದಿ ಯಾವಾಗಲೂ "ಪ್ರೇಮ, ಪ್ರಣಯ, ಶೃಂಗಾರ" ಅಂತ ಅನ್ನುತ್ತಲೇ ಇರುತ್ತಾನೆ. ಯಾವಾಗಲೂ ಆಗುಹೋಗದ ವಿಷಯಗಳನ್ನೇ ತಲೆಯಲ್ಲಿ ತುಂಬಿಕೊಂಡು ಪೇಚಾಡುವ ಪ್ರಾಣಿ. ಒಂದು ದಿನ ಲಾಲ್‌ಬಾಗಿಗೆ ಹೋಗಿದ್ದೆವು. "ನಾಡಿಗೇರ್, ಇಲ್ಲಿ ನೋಡು, ನಾನು ದಾರಿಯಲ್ಲಿ ಹೋಗುತ್ತಿರುವಾಗ ಒಂದು ಕಾರು ಬರಬೇಕು. ಅದು ಅಕಸ್ಮಾತ್ ಒಬ್ಬ ಸುಂದರಿಯ ಮೇಲೆ ಹರಿದು ಹೋಗುವಷ್ಟರಲ್ಲಿ ನಾನು ಅವಳನ್ನು ಪಾರು ಮಾಡಬೇಕು. ಆಹಾ! ಸುಂದರಿಯ ಕೃತಜ್ಞತೆಯ ನೋಟ ಹೇಗಿರುತ್ತೆ ಅಂತೀಯ! ಇಲ್ಲದಿದ್ದರೆ, ಒಂದು ದೊಡ್ಡ ಮಹಡಿ ಮನೆಗೆ ಬೆಂಕಿ ಹತ್ತಬೇಕು. ಮೇಲುಪ್ಪರಿಗೆಯಲ್ಲಿ ಹುಡುಗಿಯೊಬ್ಬಳು ಮಲಗಿದ್ದಾಳೆ. ಮನೆಯ ಕೆಳಭಾಗವೆಲ್ಲ ದಣದಣ ಉರಿಯುತ್ತಿದೆ. ಅವಳನ್ನು ರಕ್ಷಿಸಲು ಯಾರಿಂದಲೂ ಸಾಧ್ಯವಿಲ್ಲ. ಆಗ ಜನಸಂದಣಿಯನ್ನು ಓರೆಮಾಡಿ ಉರಿಯುತ್ತಿರುವ ಮನೆಯೊಳಕ್ಕೆ ನುಗ್ಗಿ ಅವಳನ್ನು ರಕ್ಷಿಸಲು ಮೇಲಕ್ಕೆ ಹೋಗುತ್ತೇನೆ. ನನ್ನನ್ನು ಕಂಡಕೂಡಲೇ ಅವಳು ಮೂರ್ಛೆ ಬೀಳುವಳು. ಬೀಳುವವಳನ್ನು ಹಾಗೆಯೇ ಅಂತರಿಕ್ಷದಲ್ಲಿಯೇ ಹಿಡಿದುಕೊಂಡು, ಸಂತಾಪಕನು ನಿರುಪಮೆಯನ್ನು ಹೊತ್ತುಕೊಂಡು ಬರುವಂತಿರುವಾಗಿನ ಆ ದೃಶ್ಯ! ಆ ಸುಖ!....ಹೀಗೆಯೇ ರಾಜನ ಹಂಬಲ.

ಈಚೆಗೆ ಅವನ ರೇಡಿಯೋ ಕೇಳಿಕೇಳಿ ಸುಸ್ತಾಗಿ ಅವನ ಜೊತೆ ತಿರುಗಾಡುವುದಕ್ಕೆ ಹೋಗುವುದನ್ನೇ ಬಿಟ್ಟಿದ್ದೇನೆ.

ಒಂದು ದಿನ ರಾಜ ಯಥಾಪ್ರಕಾರ ಲಾಲ್‌ಬಾಗಿಗೆ ಸಾಯಂಕಾಲ ಹೋದ. ಎಲ್ಲ ಬೆಂಚುಗಳೂ ಭರ್ತಿಯಾಗಿದ್ದುವು. ಮೂಲೆಯಲ್ಲೊಂದು ಬೆಂಚು ಬರಿದಾಗಿತ್ತು. ರಾಜ ಧಾವಿಸಿದ. ಇನ್ನೇನು ಕೂಡಬೇಕು ಅನ್ನುವಷ್ಟರಲ್ಲಿ ಆ ಬೆಂಚಿನ ಮೇಲೆ ಒಂದು ಲಕೋಟೆಯಿತ್ತು. ಲಕೋಟೆಯ ಮೇಲೆ ವಿಳಾಸವಿಲ್ಲ. ಕುತೂಹಲದಿಂದ ಅದನ್ನು ಬಿಚ್ಚಿದ. ಅದನ್ನು ಬಿಚ್ಚುವಾಗಲೇ ಗಮಗಮಿಸುವ ವಾಸನೆ ವಾತಾವರಣದಲ್ಲೆಲ್ಲ ಹಬ್ಬಿತು. ಒಳಗೊಂದು ನುಣುಪಾದ ಕಾಗದ. ಅದರಲ್ಲಿ ಐದು ಸಾಲಿನ ಒಕ್ಕಣೆಯಿತ್ತು.

" ನನ್ನಿಂದ ನಿಮ್ಮ ಮುಖಕಮಲ ಅರಳುವದೆಂಬ ದೃಢವಾದ ನಂಬಿಕೆ ನನಗಿದೆ. ನಿಮ್ಮನ್ನು ಸೇರಲು ಆತುರಳಾಗಿದ್ದೇನೆ. ಇತಿ, ಸುಂದರಿ.... ಬೀದಿ.... ನಗರ."

ರಾಜನ ಮನಃಸ್ಥಿತಿಯನ್ನು ಅನುಭವಿಸಬೇಕೇ ವಿನಾ ವರ್ಣಿಸಲು ಅಸಾಧ್ಯ. ಆದ್ದರಿಂದ ಅದನ್ನು ಅಲ್ಲಿಗೇ ಬಿಡುತ್ತೇನೆ. ಅವನು ಕೂಡಲೇ ಮನೆಗೆ ಹೋಗಿ ಅಗಸನು ಅಂದೇ ಮಧ್ಯಾಹ್ನ ತಂದಿರಿಸಿದ ಬಟ್ಟೆಗಳನ್ನು ಹಾಕಿಕೊಂಡು ಹೊರಟ. ಪತ್ರದಲ್ಲಿ ಬರೆದ ವಿಳಾಸವನ್ನು ಹುಡುಕಿಕೊಂಡು ಹೊರಟ. ಅವನಿಗೆ ಆಶ್ಚರ್ಯವಾಯಿತು ವಿಳಾಸದಲ್ಲಿ ಏನಾದರೂ ತಪ್ಪಿರ ಬಹುದೇ ಅಂತ. ಏಕೆಂದರೆ ನಂ. ೫೭ ಒಂದು ಅಂಗಡಿಯಾಗಿತ್ತು. ಅತ್ತಿತ್ತ ತಿರುಗಾಡಿದ. ಅಂಗಡಿಯಿಂದ ಯಾರೋ ಕೂಗಿದರು. " ಬನ್ನಿ ಸ್ವಾಮಿ." ಒಳಗೆ ಹೋದ ರಾಜ. " ನೀವು ಸುಂದರಿಗಾಗಿ ಬಂದಿರುವಂತೆ ತೋರುತ್ತೆ." ರಾಜ ಮಾತನಾಡಲಿಲ್ಲ 'ಸುಂದರಿ'ಯನ್ನು ರಾಜನ ಕೈಗೆ ಕೊಟ್ಟ. ಅದೇ " ಸುಂದರಿ ಸ್ನೋ ". ಬೆಲೆ ಒಂದು ರೂಪಾಯಿ. ರಾಜ ಒಂದು ರೂಪಾಯಿ ಕೊಟ್ಟ. 'ಸುಂದರಿ'ಯನ್ನು ಜೇಬಿನಲ್ಲಿ ಹಾಕಿಕೊಂಡು ಬಂದ. ಅಂಗಡಿ ಯೆದುರಿನಲ್ಲಿ ಸುಮಾರು ಮುವ್ವತ್ತು ನಲವತ್ತು ಜನ ಅಣ್ಣಾವಂಟಿಗಾರರು ನಿಂತಿದ್ದರು. " ಏನು ಸ್ವಾಮೀ, ಸುಂದರಿ ಹೇಗೆ ಇದ್ದಾಳೆ ?" ಎಂತ ಒಬ್ಬರು ಕೇಳಿದರು. ರಾಜನಿಗೆ ತಿಳಿಯಿತು ; ತನ್ನಂತೆಯೇ ಅವರೂ ಬೇಸ್ತು ಬಿದ್ದವ ರೆಂದು. ಬರಲಾರದ ನಗೆಯೊಂದನ್ನು ಹೊರಕ್ಕೆ ತೆಗೆದು, ಹೊರಬಿದ್ದನು. ಈಚೆಗೆ ತಿಳಿದು ಬಂದದ್ದರಲ್ಲಿ ಅಂಗಡಿಯವನು ಆ ದಿನ ಒಂದು ಗ್ರೋಸ್ " ಸುಂದರಿ ಸ್ನೋ " ಮಾರಿದ್ದನಂತೆ.

ಒಬ್ಬ ಮಾರ್ವಾಡಿಗೆ ಅಂಗಡಿಯಲ್ಲಿನ ವ್ಯಾಪಾರ ಬಹಳ ಕಡಿಮೆ ಯಾಯಿತು. ಒಂದು ದಿನ ಊರಿನಲ್ಲಿ ಸಾವಿರಾರು ಹಸ್ತಪತ್ರಿಕೆಗಳನ್ನು ಹಂಚಿದ. ಅವನ ಅಂಗಡಿಯಲ್ಲಿ ತೆಗೆದುಕೊಳ್ಳುವ ಪ್ರತಿ ಸಾಮಾನಿಗೂ ಒಂದು ಸಿಗಾರ್‌ಲೈಟರ್ ಮತ್ತು ಒಂದು ಕೋಟ್‌ಹ್ಯಾಂಗರ್ ಕೊಡಲಾಗುವು ದೆಂದು ಸಾರಿದ. ಬೆಳಕುಹರಿಯುವಷ್ಟರಲ್ಲಿಯೇ ಒಬ್ಬ ಶೆಟ್ಟಿ ಮೂರುಕಾಸಿನ ಸಾಮಾನುಗಳನ್ನು ತೆಗೆದುಕೊಂಡು ಬಹುಮಾನಗಳನ್ನು ಕೇಳಿದ. ಮಾರ್ವಾ

ಡಿಯು ಒಳಗೆ ಹೋಗಿ ಒಂದು ಬೆಂಕಿಕಡ್ಡಿಯನ್ನೂ ಒಂದು ಕಬ್ಬಿಣದ ಮೊಳೆಯನ್ನೂ ತಂದುಕೊಟ್ಟ.

ಇದುವರೆಗೆ ಹೇಳಿದುದೆಲ್ಲವೂ ವ್ಯಾಪಾರಕ್ಷೇತ್ರದಲ್ಲಿನ ಜಾಹೀರಾತುಗಳಿಗೆ ಸಂಬಂಧಿಸಿದ್ದಾಯಿತು. ನಮ್ಮ ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲಿಯೂ ಜಾಹೀರಾತು ಮತ್ತು ಅದರ ಸಾಹಿತ್ಯ ತನ್ನದೇ ಆದ ಒಂದು ಸ್ಥಾನವನ್ನು ಕಲ್ಪಿಸಿಕೊಂಡಿದೆ.

ಯಾವುದಾದರೂ ಸಭೆಗೆ ಯಾರನ್ನಾದರೂ ಅಧ್ಯಕ್ಷರನ್ನಾಗಿ ಆರಿಸಿದರೆ ಅವರು "ನಾನು ಅಧ್ಯಕ್ಷನಾಗಲು ಅಯೋಗ್ಯನಿದ್ದೇನೆ, ಅನನುಭವಿ. ಆದರೆ ನೀವು ಕೇವಲ ನಿಮ್ಮ ಅಭಿಮಾನದಿಂದ ನನ್ನನ್ನು ಈ ಸ್ಥಾನಕ್ಕೆ ಆರಿಸಿರುವಿರಿ" ಎಂದು ಹೇಳುವರು. ಅಂದರೆ ಜನಗಳಿಗೆ ಇವರು ತಮ್ಮ ಯೋಗ್ಯತೆ (ಅ) ಅನನುಭವಿತನ ಮುಂತಾದುವುಗಳನ್ನು ಜಾಹೀರಪಡಿಸುತ್ತಾರೆ. ಇದು ವ್ಯರ್ಥ. ಜನಗಳಿಗೆ ಇವೆಲ್ಲಾ ಗೊತ್ತೇ ಇರುತ್ತೆ.

ಅನೇಕರು ತಾವು ಬಡವರಾಗಿದ್ದರೂ ತಮ್ಮ ಬಡತನ ಹೇಳಿಕೊಳ್ಳಲು ಅವರಿಗೆ ಸಂಕೋಚ. ಅವರು ಹೇಳುವ ವರಮಾನ ಅವರ ಬೀದಿಯಲ್ಲಿರುವವರ ವರಮಾನಗಳನ್ನೆಲ್ಲಾ ಸೇರಿಸಿದರೆ ಎಷ್ಟಾಗುವುದೋ ಅಷ್ಟು ಹೇಳುತ್ತಾರೆ. ಇದಕ್ಕೆ ನಾನು 'ದರಿದ್ರಜಾಹೀರಾತು' ಎಂದು ಕರೆಯುತ್ತೇನೆ.

ಹೀಗೆಯೇ ಅನೇಕರು ಇತರರನ್ನು ಅನುಕರಣ ಮಾಡುವುದಕ್ಕೆನ್ನಿರಿ, ಅಥವಾ ಜಾಹೀರಾತಿಗಾಗಿ ಎನ್ನಿರಿ, ಮದುವೆ ಮುಂತಾದ ಸಮಯದಲ್ಲಿ ತಮ್ಮ ಯೋಗ್ಯತೆ ಮೀರಿ ವಿಪರೀತ ಖರ್ಚುಮಾಡಿ ತಾವು ಅನುಕೂಲಸ್ಥರೆಂದು ಜಾಹೀರಾತು ಮಾಡಿಕೊಳ್ಳುತ್ತಾರೆ. ಆದರೆ ಮೂರು ವರ್ಷದ ಮೇಲೆ ಅಂಥವರ ಮನೆಗೆ ಒಂದುಸಾರಿ ಹೋಗಿದ್ದೆ. ಓಲಗದವರು ಬಂದಿದ್ದರು. ಓಲಗ ಊದುವದಕ್ಕಲ್ಲ. ಆ ಹಿಂದಿನ ಮದುವೆ ಸಮಾರಂಭದಲ್ಲಿ ಓಲಗ ಊದಿದ್ದಕ್ಕೆ ದುಡ್ಡು ಕೊಟ್ಟಿರಲಿಲ್ಲವಂತೆ. ಆದರ ಬಾಕಿ ವಸೂಲಿಗೆ ಬಂದಿದ್ದರು.

ಅನೇಕ ಪತ್ರಿಕೆಗಳಲ್ಲಿ "ಇಲ್ಲಿ ಜಾಹೀರಾತಿಗೆ ಸ್ಥಳವಿದೆ" ಎಂದು ಬರೆದುಕೊಂಡಿರುತ್ತಾರೆ. ಅಂದರೆ ಅಲ್ಲಿ ಎಂತಹ ಮಹತ್ವದ ಸುದ್ದಿಗೂ ಜಾಗವಿಲ್ಲ

ಎಂದರ್ಥ. ಏಕೆಂದರೆ ಸುದ್ದಿಯಿಂದ ಹಣ ಬರುವುದಿಲ್ಲ. ಜಾಹೀರಾತಿನಿಂದ ಬರುತ್ತದೆ.

ಈಗಿನ ದಿನಗಳಲ್ಲಿ ಮನುಷ್ಯನು ಬಾಳಿ ಬದುಕುವುದು ಜಾಹೀರಾತಿನಿಂದಲೇ. ಒಂದುಸಾರಿ ಒಂದು ಪತ್ರಿಕೆಯಲ್ಲಿ ಒಂದು ಜಾಹೀರಾತು ಪ್ರಕಟಿಸಲ್ಪಟ್ಟಿತ್ತು. ಕೇವಲ ೫ ರೂಪಾಯಿಗೆ ೫೩ ಉಪಯುಕ್ತ ಸಾಮಾನುಗಳು. ಅಲ್ಲಿಯೇ ನನ್ನ ಬಾಯಿ ನೀರೊಡೆದು ಆ ಪತ್ರಿಕೆಯ ಮೇಲೆಲ್ಲಾ ಬಿದ್ದಿತು ಅಂದೇ ೫ ರೂಪಾಯಿ ಕಳಿಸಿದೆ ವಿ. ಪಿ. ಬಂದಿತು. ೧ ಇಸ್ಪೇಟು ಪ್ಯಾಕ್ (೫೨ ಸಾಮಾನುಗಳು) ೧ ಸ್ಕ್ರ್ಯೂ ಡ್ರೈವರ್. ಒಟ್ಟು ಎಂಟಾಣೆ ಸಹ ಬಾಳುವುದಿಲ್ಲ ಅವು. ಈ ವಿಷಯವನ್ನು ಇದುವರೆವಿಗೂ ನಾನು ಯಾರಿಗೂ ಹೇಳಿಲ್ಲ. ಏನೋ ನಮ್ಮ....ನಿಮ್ಮ....

ಒಂದುಸಾರಿ ಇಂಡಿಯಾ ಟೀ ಸೆಸ್ ಕಮಿಟಿಯವರು ಚಹದ ಪ್ರದರ್ಶನ ಏರ್ಪಟ್ಟಿದ್ದರು. ಚಹಾದೇವಿಯ ಗುಣಗಾನ ಯಥೇಷ್ಟವಾಗಿ ನಡೆದಿತ್ತು ಚಹದಿಂದ ಎಂತಹ ರೋಗಗಳೂ ಗುಣವಾಗುವುದೆಂದು ಹೇಳಿದರು. ಹಳ್ಳಿಯವನೊಬ್ಬ ತನ್ನ ಮಗುವಿಗೆ ಕಾಯಿಲೆಯಾಗಿದೆಯೆಂದು ಆಸ್ಪತ್ರೆಯಲ್ಲಿ ಔಷಧಿ ತೆಗೆದುಕೊಳ್ಳಲು ಬಂದಿದ್ದ. ಆದರೆ ಚಹದ ಗುಣವರ್ಣನೆಯನ್ನು ಕೇಳಿ ಮೂರು ಕಾಸು ಕೊಟ್ಟು ಚಹಾಪುಡಿ ತೆಗೆದುಕೊಂಡು ಹೋದ. ಆ ಮುದುಕನ ಹಳ್ಳಿಗೆ ನಾನಿನ್ನೂ ಹೋಗಿಲ್ಲವಾದ್ದರಿಂದ ಅವನ ಮಗು ಬದುಕಿರುವುದಾಗಲೀ, ಸತ್ತಿರುವುದಾಗಲೀ ನನಗೆ ಗೊತ್ತಿಲ್ಲ.

ಜಾಹೀರಾತುಗಳಿಗೆ ಚಿತ್ರಗಳೇ ಬಹಳ ಮುಖ್ಯ. ಅದರಲ್ಲಿಯೂ ಸ್ತ್ರೀಯರ ಚಿತ್ರಗಳಿದ್ದರೇ ಆ ಜಾಹೀರಾತುಗಳಿಗೆ ಹೆಚ್ಚಿನ ಶೋಭೆ. ಯಾವಳೋ ಸಿನಿಮಾತಾರೆ ಆ ಪದಾರ್ಥವನ್ನು ಉಪಯೋಗಿಸುತ್ತಾಳೆಂದರೆ ಅದಕ್ಕೆ ಹೆಚ್ಚಿನ ಗಿರಾಕಿಗಳು. ನಿಜವಾಗಿಯೂ ನೋಡಿದಲ್ಲಿ ಆ ತಾರಕೆ ಆ ಪದಾರ್ಥದ ಹೆಸರನ್ನೂ ಸಹ ಕೇಳಿರುವುದಿಲ್ಲ. ಅದರ ಉಪಯೋಗವಾದರೂ ಅವಳಿಗಿರುವುದು ಅನುಮಾನಾಸ್ಪದವಾದ ವಿಷಯವೇ ಸರಿ. ಆದರೆ ಆ ತಾರಕೆ ತನ್ನ ಚಿತ್ರವನ್ನು ಪ್ರಕಟಿಸುವುದಕ್ಕೂ, ಆಕೆಯ ಸಂದೇಶ ಕೊಡುವುದಕ್ಕೂ ಅನುಜ್ಞೆ (ಬಿಟ್ಟಿ ಅಲ್ಲ) ಕೊಟ್ಟಿರುತ್ತಾಳೆ.

ಕೆಲವು ಸಂದರ್ಭಗಳಲ್ಲಿ ಬಹು ಅಸಂಗತವಾದ ಚಿತ್ರಗಳನ್ನು ಪ್ರಕಟಿಸಿರುತ್ತಾರೆ. ಒಂದು ಜಪಾನ್ ರೇಜರ್‌ಸೆಟ್ ಮೇಲೆ ಒಂದು ಸ್ತ್ರೀ ಚಿತ್ರವಿದ್ದಿತು. ಇದರಬಗ್ಗೆ ಹೆಚ್ಚು ಬರೆಯಲು ಶಕ್ತಿಯಿಲ್ಲದೆ ಮುಂದೆ ಸಾಗುತ್ತೇನೆ.

ನಮ್ಮ ದೇಶದಲ್ಲಿ ರಾಷ್ಟ್ರೀಯ ಆಂದೋಲನ ಆರಂಭವಾಗಲು ರಾಷ್ಟ್ರಭಕ್ತರ ಚಿತ್ರಗಳು ಬಹು ಪ್ರಸಿದ್ಧಿಗೆ ಬಂದುವು. "ಗಾಂಧಿ ಬೆಂಕಿ ಪೆಟ್ಟಿಗೆ" "ನೆಹರೂ ಸೀಮೆಯೆಣ್ಣೆ". ನೇತಾಜಿ ಬೋಸ್, ಕ್ಯಾಪ್ಟನ್ ಲಕ್ಷ್ಮೀ ಇವರ ಹೆಸರುಗಳನ್ನೂ ಜೈ ಹಿಂದ್ ಮಹಾಮಂತ್ರವನ್ನೂ ದುರುಪಯೋಗಪಡಿಸಿಕೊಳ್ಳದಿದ್ದವರು ಪಾಪಿಗಳೇ ಸರಿ

ಒಂದುಸಾರಿ ಹುಬ್ಬಳ್ಳಿಯಲ್ಲಿ ಒಂದು ಬೋರ್ಡ್ ನೋಡಿದೆ. ಅದರ ಮೇಲೆ "ಸಾಹಿತ್ಯ ಸಂಗ್ರಹ ಕಾಫಿ ಕ್ಲಬ್" ಅಂತ ಇತ್ತು. ಈ ಬಗ್ಗೆ ನಿಮಗೇನಾದರೂ ಅರ್ಥವಾದರೆ ನನಗೆ ತಿಳಿಸಿದರೆ ಉಪಕೃತನಾಗುತ್ತೇನೆ.

ಆದರೆ ಇದಕ್ಕೂ ಚಮತ್ಕಾರಿಕ ಒಂದು ಸಂಗತಿ ಹೇಳುತ್ತೇನೆ. "ತಂಪಾದ ಬ್ರಾಹ್ಮಣರ ಪಾನೀಯಗಳು ಇಲ್ಲಿ ಸಿಕ್ಕುತ್ತವೆ" ಎಂತ ಉರಿಯುವ ಬೇಸಿಗೆಯಲ್ಲಿ ಒಂದೂರಿನಲ್ಲಿ ಒಂದು ಬೋರ್ಡ್ ಹಾಕಿದ್ದರು. ಬ್ರಾಹ್ಮಣರೇ ಅಷ್ಟೊಂದು ತಂಪಾಗಿರುವಾಗ ಅವರ ಪಾನೀಯಗಳು ಇನ್ನೆಷ್ಟು ತಂಪಿರಬೇಕು!

ಜಾಹೀರಾತಿನ ನಾಡುನುಡಿ ಭಕ್ತರ ವಿಷಯವನ್ನೇನಾದರೂ ಕೇಳಿದ್ದೀರಾ? ಇಲ್ಲದಿದ್ದರೆ ಹೇಳುತ್ತೇನೆ ಕೇಳಿ. ಈ ಭಕ್ತರು ಒಂದೂರಿನಿಂದ ಇನ್ನೊಂದೂರಿಗೆ ಹೋದರೆ ತಾವೇ ಪತ್ರಿಕೆಗಳಿಗೆ ಬರೆಯುತ್ತಾರೆ. "ದೇ. ಭ........ನಿನ್ನೆ ಊರಿಗೆ ಬಂದರು. ಮಹತ್ತರವಾದ ಕೆಲ ಸಮಸ್ಯೆಗಳನ್ನು ಮುಖಂಡರೊಡನೆ ಚರ್ಚಿಸಲು ಇಲ್ಲಿಗೆ ಬಂದಿದ್ದಾರೆ. ಅವರು ನಾಡುನುಡಿ ಸೇವೆಯನ್ನು ದಣಿವರಿಯದೆ ಮಾಡಿದವರು. ಕನ್ನಡಾಂಬೆಯು ಇವರ ಸೇವೆಯನ್ನು ಇನ್ನೂ ತೆಗೆದುಕೊಳ್ಳಲಿ."

ಈ ಜಾಹೀರಾತಿನ ಸಾಹಿತ್ಯವನ್ನು ಹೀಗೆಯೇ ಬೆಳೆಸುತ್ತ ಹೋದರೆ ನನಗೆ ತಿಳಿಯದೆ ನನ್ನ ಜಾಹೀರಾತು ಮಾಡಿಕೊಂಡೇನೆಂಬ ಭಯದಿಂದ ಇಲ್ಲಿಗೇ ಮುಗಿಸುತ್ತೇನೆ.

# ಜಾಹೀರಾತಿನಲ್ಲಿ ಹಾಸ್ಯ

ಜಡವಲ್ಲಿ ಚೇತನ ಅಡಗಿರುವಂತೆ, ಶೀತಲ ಕಾಷ್ಠದಲ್ಲಿ ಅಗ್ನಿ ಹುದುಗಿರುವಂತೆ ನಿರ್ಜೀವ ಜಾಹೀರಾತುಗಳಲ್ಲಿ ಸಜೀವ ಹಾಸ್ಯ ಅಡಗಿರುತ್ತದೆ. ಇವನ್ನು ಬಗೆಗಣ್ಣಿನಿಂದ ನೋಡುವ ಹಾಗೂ ಅವುಗಳಲ್ಲಿ ಅಡಗಿರುವ ಹಾಸ್ಯವನ್ನು ಆಸ್ವಾದಿಸುವ ಮನೋವೃತ್ತಿ ಇರಬೇಕು.

ಪತ್ರಿಕೆಗಳಲ್ಲಿ ಪ್ರಕಟವಾಗುವ 'ಬೇಕಾಗಿದೆ' ಜಾಹೀರಾತುಗಳಲ್ಲಿ ನಮಗೆ ಬೇಕಾದಷ್ಟು ಹಾಸ್ಯಗಳು ದೊರೆಯುತ್ತವೆ. ಮೊನ್ನೆ ಒಂದು ಪತ್ರಿಕೆಯಲ್ಲಿ ಪ್ರಕಟವಾದ ಜಾಹೀರಾತು ಈ ರೀತಿ ಇತ್ತು: "ದೃಢಕಾಯನೂ, ದಷ್ಟಪುಷ್ಟನೂ, ನಿರೋಗಿಯೂ ಆದ ಜವಾನನೊಬ್ಬನು ಬೇಕಾಗಿದ್ದಾನೆ. ತಿಂಗಳಿಗೆ ಇಪ್ಪತ್ತುರೂಪಾಯಿ." ಇಪ್ಪತ್ತುರೂಪಾಯಿ ಸಂಬಳ ತೆಗೆದುಕೊಂಡು ಆ ಮನುಷ್ಯ ರೇಷನ್ ಸಾಮಾನುಗಳನ್ನು ಕೊಂಡುಕೊಳ್ಳುವುದು ಹೇಗೆ? ಮತ್ತು ತನ್ನ ಕಾಯವನ್ನು ದೃಢವಾಗಿಯೂ ದಷ್ಟಪುಷ್ಟವಾಗಿಯೂ ಇಟ್ಟಿರುವುದು ಹೇಗೆ?

ಶೀಘ್ರಲಿಪಿಗಾರನ ಕೆಲಸ ಖಾಲಿ ಇದೆಯೆಂದೂ ಅದಕ್ಕೊಬ್ಬ ಉಮೇದುವಾರ ಬೇಕೆಂದೂ ಒಂದು ಜಾಹೀರಾತು ಪ್ರಕಟವಾಗಿತ್ತು. ದಿನಕ್ಕೆ ಅದೆಷ್ಟು ಕಡಿಮೆ ರೂಪಾಯಿಗಳ ಸಂಬಳ ಎಂಬುದು ನನಗೆ ನೆನಪಿಲ್ಲ. ಆದರೆ ಅವೆರಡನ್ನೂ ನೋಡಿದಾಗ ಕೆಲಸಕ್ಕೆ ಇಟ್ಟುಕೊಳ್ಳುವ ಮಾಲೀಕ ಅದೆಂಥ ಹೀನ ಮನುಷ್ಯ ಎಂಬುದು ಅದರಿಂದ ವ್ಯಕ್ತವಾಗುತ್ತಿತ್ತು. ಉಮೇದುವಾರನು ಅತ್ಯಂತ ಬಡವರ ಮನೆಯವನಾಗಿರಬೇಕೆಂದು ಒಂದು ಕರಾರನ್ನು ಸಹ

ಮಾಲೀಕ ಹಾಕಿದ್ದ. ಉಮೇದುವಾರ ಕಡುಬಡವರ ಮನೆಯವನಾದರೆ ಹಣದ ತಾಪತ್ರಯದಿಂದ ಇದ್ದ ಕೆಲಸಕ್ಕೇ ಅವನು ಅಂಟಿಕೊಂಡಿರಬೇಕಾಗುತ್ತದೆ. ಹೆಚ್ಚು ಗಂಟೆಗಳ ಕೆಲಸ ಮತ್ತು ಅತ್ಯಂತ ಕಡಿಮೆ ಸಂಬಳ ಬಂದರೂ ಅವನು ಕೆಲಸ ಬಿಟ್ಟು ಓಡಿಹೋಗುವದಿಲ್ಲವೆಂಬ ನಂಬಿಕೆ ಮಾಲೀಕನಿಗೆ ಇದ್ದೀತು.

ಕಾಗದದಲ್ಲಿ ಅಚ್ಚು ಹಾಕಿಸಲು ಸಹ ಹೀನವಾದಂಥ ಸಂಬಳ ಕೊಡುತ್ತೇವೆಂದು ಹೇಳುವದಲ್ಲದೆ, ಕೆಲವು ಮಾಲೀಕರು, "ಕಷ್ಟಪಟ್ಟು ಕೆಲಸಮಾಡುವ ಆಸೆ ಇರುವ" ಮನುಷ್ಯ ಬೇಕಾಗಿದ್ದಾನೆಂದು ಬರೆದು ಕೊಂಡಿರುತ್ತಾರೆ. ಆದರೆ ತಮ್ಮ ಕೆಲಸಕ್ಕೆ ಇಬ್ಬರು ಬೇಕಾಗಿರುತ್ತಾರೆ. ಒಬ್ಬನಿಂದಲೇ ಹೆಚ್ಚು ಕೆಲಸ ತೆಗೆಯಲು ಇದೊಂದು ಹವಣಿಕೆ.

ಇನ್ನೊಂದು ಜಾಹೀರಾತಿನಲ್ಲಿ "ಸ್ಫುರದ್ರೂಪಿಯಾದ ಅಡಿಗೆಯವನೊಬ್ಬನು ಬೇಕಾಗಿದ್ದಾನೆ" ಎಂದು ಕೇಳಿದ್ದರು. ಅಡಿಗೆಯವನ ರೂಪ ಹೆಚ್ಚಿದಂತೆ ಅವನ ಅಡಿಗೆಯ ರುಚಿಯೂ ಹೆಚ್ಚುವದೆಂದು ಆ ಜಾಹೀರಾತುದಾರರು ತಿಳಿದಿದ್ದಂತೆ ತೋರುತ್ತದೆ.

'ವರ-ಕನ್ಯೆಗಳು ಬೇಕಾಗಿದೆ' ಜಾಹೀರಾತುಗಳಲ್ಲಿ ಸಹ ರಸವತ್ತಾದ ಹಾಸ್ಯ ನಮಗೆ ದೊರೆಯುತ್ತದೆ. ಅನುಪಮ ಸುಂದರಿಯೂ, ವಿದ್ಯಾವತಿಯೂ, ಮನೆಕೆಲಸಗಳನ್ನು ಮಾಡಬಲ್ಲವಳೂ ಆದ ಕನ್ಯೆಯೊಬ್ಬಳು ಬೇಕಾಗಿದ್ದಾಳೆ, ಎಂಬುದಾಗಿ ಭಾವೀವರನೊಬ್ಬನು ಪತ್ರಿಕೆಗಳಲ್ಲಿ ಜಾಹೀರಾತು ಹಾಕಿರುತ್ತಾನೆ. ಅವನು ಜಾಹೀರಾತಿನಲ್ಲಿ ವರ್ಣಿಸಿರುವ ಗುಣಗಳೆಲ್ಲ ಅವನಿಗೆ ಬೇಕಾಗಿದ್ದರೆ ಅವನು ಮೂರು ಜನ ಹುಡುಗಿಯರನ್ನು ಏಕಕಾಲಕ್ಕೆ ಮದುವೆಯಾಗುವದೇ ಒಳಿತಾಗಿರುತ್ತದೆ.

ವರ ತನ್ನ ರೂಪಲಾವಣ್ಯಗಳ ಬಗ್ಗೆ ಏನೂ ಹೇಳಿರುವದಿಲ್ಲ. ಆದರೆ ತನಗೆ ಮಾತ್ರ ಅಪ್ರತಿಮ ಸುಂದರಿಯೇ ಬೇಕು. ಇನ್ನು ಕೆಲವು ಹೆಂಕು ವರಗಳಿರುತ್ತವೆ. ಅವಕ್ಕೆ ಮದುವೆ ಎಂಬುದು ಮಾತ್ರ ಆದರೆ ಸಾಕು. ಕನ್ಯೆ ೪೦ ವರ್ಷಗಳೊಳಗಿದ್ದರೆ ಸಾಕು, ವಿಧವೆಯಾದರೆ ಚಿಂತೆಯಿಲ್ಲ, ಜಾತಿ

ಕುಲಗಳ ಯೋಚನೆ ಬೇಡ ಅಂತ ಬರೆದುಕೊಂಡಿರುತ್ತಾರೆ. ಖಟ್ಟಾ ಸಮಾಜ ಸುಧಾರಕರ ಎದೆ ಸಹ ಈ ಜಾಹೀರಾತು ನೋಡಿ ನಡುಗಿ ಹೋದೀತು.

ಇನ್ನು ಕೆಲವು ವರಗಳು ಬರೀ ಹಣಕ್ಕಾಗಿ ತಮ್ಮನ್ನು ಮಾರಿಕೊಳ್ಳಲು ಸಿದ್ಧವಾಗಿವೆಯೆಂಬುದನ್ನು ನಾವು ಕಾಣಬಹುದು. "ವರ ವಿದೇಶಕ್ಕೆ ವ್ಯಾಸಂಗಕ್ಕೆ ಹೋಗಬೇಕಾಗಿದೆ. ವರದಕ್ಷಿಣೆ ೧೫ ಸಾವಿರ ರೂಪಾಯಿಗಳನ್ನು ಕೊಡಬಲ್ಲ ಕನ್ಯೆಯನ್ನು ಮದುವೆಯಾಗಲು ಸಿದ್ಧನಿದ್ದೇನೆ" ಎಂದು ನಾಚಿಕೆಯಿಲ್ಲದೆ ಹೇಳಿಕೊಂಡಿರುತ್ತಾನೆ. ತನ್ನ ತಂಗಿಯನ್ನು ಯಾರಾದರೂ ಮದುವೆಯಾಗುವವರಿದ್ದರೆ ಅವರ ಮನೆಯಲ್ಲಿಯೇ ಇರುವ ಕನ್ಯೆಯೊಂದನ್ನು ತಾನು ಮದುವೆಯಾಗುವದಾಗಿ ಇನ್ನೊಬ್ಬ ವರ ಆಶ್ವಾಸನ ಕೊಟ್ಟಿರುತ್ತಾನೆ. ದುಡಿಯುವ ಹೆಂಡತಿ ಸಿಕ್ಕರೆ ಅನುಕೂಲವಾದೀತೆಂದು, ಸರ್ಕಾರಿ ನೌಕರಿಯಲ್ಲಿರುವ ಕನ್ಯೆಯೇ ಬೇಕೆಂದು ಮುವ್ವತ್ತೆರಡು ಹಲ್ಲುಗಳನ್ನು ಬಿಟ್ಟು ಕೇಳಿಕೊಂಡಿರುತ್ತಾನೆ.

ಔಷಧಿ ಜಾಹೀರಾತುಗಳಲ್ಲಿ ಅತಿ ಮುಖ್ಯವಾದವೆಂದರೆ ಮುದುಕರನ್ನು ಹುಡುಗರಾಗಿ ಮಾರ್ಪಡಿಸುವ ಪೌಷ್ಟಿಕಗಳು. ಷಷ್ಟಬ್ಧಿ ಪೂರ್ತಿಮಾಡಿಕೊಂಡ ಮನುಷ್ಯ ಚಪಲಕ್ಕೆ ಮೂರನೆ ಮದುವೆ ಮಾಡಿಕೊಂಡಿರುತ್ತಾನೆ. ಗತಿಸಿ ಹೋದ ಯೌವನ ಮರಳಿ ಬರುವ ಪೌಷ್ಟಿಕಕ್ಕೆ--ಅರ್ಥಾತ್ ಸಂಜೀವಿನಿಗೆ— ಆತ ಎಷ್ಟು ನೂರು ರೂಪಾಯಿಗಳನ್ನಾದರೂ ಕೊಡಲು ಸಿದ್ಧನಿರುತ್ತಾನೆ. ಅಲ್ಲದೆ ಈ ಪೌಷ್ಟಿಕ ಲೇಹ್ಯ ತಿಂದು ಮೇಲೆ ಅರ್ಧಸೇರು ಶುದ್ಧವಾದ ಹಸುವಿನ ಹಾಲು ಕುಡಿಯಬೇಕಂತೆ. ಆದರೆ ಮುದುಕ ಈ ಲೇಹ್ಯ ಮತ್ತು ಅರ್ಧಸೇರು ಹಾಲನ್ನು ಜೀರ್ಣಿಸಿಕೊಳ್ಳುತ್ತಾನೆಯೋ ಹೇಗೆಂಬುದು ಒಂದು ವಿಚಿತ್ರ ಸಮಸ್ಯೆ. ಈ ಜಾಹೀರಾತಿನ ಗುಣಗಾನವಂತೂ ಅತ್ಯದ್ಭುತವಾಗಿರುತ್ತದೆ. ತಿಳಿಯದೆ ಒಬ್ಬ ಮುದುಕ ಈ ಪೌಷ್ಟಿಕ ಲೇಹ್ಯವನ್ನು ಹೆಚ್ಚು ಸೇವಿಸಿ ಮೂರು ಜನ ಹೆಂಡತಿಯರನ್ನು ಮದುವೆ ಮಾಡಿಕೊಳ್ಳುವ ಪ್ರಮೇಯ ಆತನಿಗೆ ಒದಗಿತಂತೆ. ಇದನ್ನೋದಿದ ನಮ್ಮೂರಿನ ಮುದುಕ ಒಬ್ಬ ಹೆಂಡತಿಯನ್ನು ಮದುವೆಯಾಗಲು ಹಿಂದು ಮುಂದು ನೋಡುತ್ತಾನೆಯೇ?

ಬಿಳಿಯ ಕೂದಲು ಕಪ್ಪಾಗುವ ಬಗ್ಗೆ ಸಹ ಸ್ವಾರಸ್ಯ ಜಾಹೀರಾತುಗಳಿರುತ್ತವೆ. ಅಚ್ಚ ಬೆಳ್ಳಿಯ ಕೂದಲು ಶಾಶ್ವತವಾಗಿ ಕಪ್ಪಾಗುವದೆಂದು ಬರೆದುಕೊಂಡಿರುತ್ತಾರೆ. ಈ ಔಷಧಿಯನ್ನು ತಲೆಗೆ ಹಾಕಿ ತಿಕ್ಕುವದರಿಂದ ತಲೆ ತಂಪಾಗಿ ದೇಹ ಗಟ್ಟಿಯಾಗುವದಂತೆ!

ಸಾಮಾನ್ಯವಾಗಿ ಜಾಹೀರಾತುದಾರರು ಮಾನವನ ಮನೋದೌರ್ಬಲ್ಯವನ್ನು ಚೆನ್ನಾಗಿ ಅರಿತಿರುತ್ತಾರೆ. ಹೆಂಗಸು ಬಳ್ಳಿಯಂತೆ ಬಳುಕುತ್ತಿರಬೇಕು, ಹತ್ತಿಮೂಟೆಯಂತಿರಬಾರದು. ಇಂಥ ಹೆಂಗಸು ತೆಳುವಾಗಲು ಯಾವ ಔಷಧಿಯನ್ನಾಗಲೀ, ಲೇಹ್ಯವನ್ನಾಗಲೀ ಸೇವಿಸಲು ಸಿದ್ಧಳಿರುತ್ತಾಳೆ. ಅತ್ಯಂತ ಸುಲಭವಾಗಿ ತಾನು ತೆಳುವಾಗಬಹುದೆಂದರೆ ಆಕೆ ಖಂಡಿತವಾಗಿಯೂ ಈ ಔಷಧಿಯನ್ನು ತರಿಸಿಕೊಳ್ಳುತ್ತಾಳೆ. ಈಕೆ ತೆಳುವಾಗುವುದು ಸುಳ್ಳಾದರೂ ಈಕೆಯ 'ಪರ್ಸ್' ತೆಳುವಾಗುವುದು ಖಂಡಿತ.

ತಾವು ತಯಾರಿಸಿರುವ ಹೊಲಸು ಸಾಮಾನುಗಳನ್ನು ನಮ್ಮ ತಲೆಗೆ ಕಟ್ಟಲು ಬಹುಮಾನಗಳ ಆಸೆಯನ್ನು ಬೇರೆ ತೋರಿಸಿರುತ್ತಾರೆ, "ನಮ್ಮ ಜಾಹೀರಾತಿನಲ್ಲಿ ಬರೆದಿರುವ ಅಂಶಗಳು ಸುಳ್ಳೆಂದು ತೋರಿಸಿಕೊಟ್ಟವರಿಗೆ ಒಂದು ಸಾವಿರ ರೂಪಾಯಿ ಬಹುಮಾನ" ನನ್ನ ಅನುಭವದಲ್ಲಿ ಈ ಸಾವಿರ ರೂಪಾಯಿಗಳ ಬಹುಮಾನವನ್ನು ಇದುವರೆಗೂ ಯಾರೂ ತೆಗೆದುಕೊಂಡಿರುವದಿಲ್ಲ. ಕಂಪನಿಯ ಹೆಸರು ಒಂದೂವರೆ ಮೊಳ ಇದ್ದರೂ ಅದು ಬರೀ ಪೋಸ್ಟ್‌ಬಾಕ್ಸ್ ವಿಳಾಸದಲ್ಲಿಯೇ ಮುಕ್ತಾಯವಾಗುತ್ತದೆ. ಆಕಸ್ಮಾತ್ತಾಗಿ ಆ ಕಂಪನಿ ಇರುವ ಊರಿಗೆ ಹೋದರೆ ಅದು ನಮಗೆಂದಿಗೂ ಸಿಕ್ಕುವದಿಲ್ಲ.

ಇನ್ನು ಕೆಲವು ಜಾಹೀರಾತುದಾರರು ತಮ್ಮ ಔಷಧಿಯನ್ನು ಸೇವಿಸಿ ಗುಣಹೊಂದಿದ ಮಹನೀಯರ ಸಹಸ್ರನಾಮಗಳನ್ನು ಕೊಟ್ಟಿರುತ್ತಾರೆ. ಇದು ಸಹ ಮೇಲೆ ವಿವರಿಸಿದ ಪೋಸ್ಟ್‌ಬಾಕ್ಸ್ ವಿಳಾಸದಂತೆಯೇ ಇರುತ್ತದೆ. ಕೆಲವು ಜನ ಔಷಧಿ ವ್ಯಾಪಾರಿಗಳು "ಗುಣ ಆಗದಿದ್ದರೆ ಹಣ ವಾಪಸು ಕೊಡುತ್ತೇವೆ" ಅಂತ ಆಶ್ವಾಸನ ಕೊಟ್ಟಿರುತ್ತಾರೆ. ಹೀಗೆ ಅವರು ಎಷ್ಟು ಜನರಿಗೆ ಹಣ

ವಾಪಸು ಮಾಡಿದ್ದಾರೆಂಬುದು ಒಂದು ದೊಡ್ಡ ಪ್ರಶ್ನಾರ್ಥಕ ಚಿಹ್ನೆಯಾಗಿ ಉಳಿದಿದೆ.

ಐದು ರೂಪಾಯಿಗಳನ್ನು ಕೊಟ್ಟರೆ ಎರಡು ಅತ್ತರ್ ಬಾಟ್ಲ್‌ಗಳನ್ನೂ, ಅದರೊಂದಿಗೆ ಒಂದು ಫೌನ್‌ಟೆನ್‌ಪೆನ್, ಒಂದು ಟಾರ್ಚ್‌ಲೈಟ್, ಉಂಗುರ ಮುಂತಾಗಿ ನೂರಾರು ಸಾಮಾನುಗಳನ್ನು ಕೊಡುವದಾಗಿ ಬರೆದಿರುತ್ತಾರೆ. ಇವೆಲ್ಲವುಗಳ ಮೊತ್ತ ಎಂದಿಗೂ ಎರಡು ರೂಪಾಯಿಗಿಂತ ಹೆಚ್ಚಾಗುವದಿಲ್ಲ ಮತ್ತು ಇವು ಯಾವೂ ಉಪಯೋಗಕ್ಕೆ ಬಾರದ ಕಸದಂತಿರುವ ಸಾಮಾನು ಗಳಾದ್ದರಿಂದ ಕಸದ ಬುಟ್ಟಿಯೇ ಇವಕ್ಕೆ ಗತಿಯೆಂದು ಹೇಳಬಹುದು. ಮೂಕ ಗಡಿಯಾರಗಳನ್ನು ಬಹುಮಾನವಾಗಿ ಕೆಲವು ಕಂಪನಿಗಳು ಹಂಚುತ್ತವೆ. ನಾವೇನು ಆಡುವ ಮಕ್ಕಳೆಂದು ಆ ಕಂಪನಿಯವರು ತಿಳಿದಿದ್ದಾರೋ ಹೇಗೆ? ಆ ಗಡಿಯಾರ ಕಟ್ಟಿಕೊಂಡರೆ ಬರುವ ಪುಣ್ಯ ಅಥವಾ ಪುರುಷಾರ್ಥವಾದರೂ ಏನು?

ಈಚೆಗೆ ಭಾರತೀಯ ಮತ್ತು ಇತರ ಶಿಲ್ಪಕಲಾ ಕೃತಿಗಳನ್ನು ಜಾಹೀರಾತಿ ಗಾಗಿ ಬಳಸಲಾರಂಭಿಸಿದ್ದಾರೆ. ಕಾಫಿಪುಡಿ ಕಂಪನಿಯವರು ಲಕ್ಷಣವಾಗಿ ಗೋಮಟೇಶ್ವರನ ವಿಗ್ರಹದ ಚಿತ್ರವನ್ನು ಕೊಟ್ಟಿರುತ್ತಾರೆ. ಅನೇಕ ಶತಮಾನ ಗಳಾದರೂ ಗೋಮಟೇಶ್ವರ ವಿಗ್ರಹವು ಅಚ್ಚಳಿಯದೆ ಉಳಿದಿದೆಯೋ, ಅದೇ ರೀತಿಯಲ್ಲಿ ಈ ಬ್ರಾಂಡಿನ ಕಾಫೀಪುಡಿಯು ಅನೇಕ ವರ್ಷಗಳಿಂದ ತನ್ನ ಸ್ವಾದವನ್ನು ಕಳೆದುಕೊಂಡಿಲ್ಲವೆಂದು ಹೇಳುತ್ತಾರೆ. ಬಿಳಿಯ ಕೂದಲು ಕಪ್ಪಾ ಗುವ ಔಷಧಿಗೆ ಬೇಲೂರಿನ ಶಿಲಾಬಾಲಿಕೆಯರ ಚಿತ್ರಗಳನ್ನು ಹಾಕಿರುತ್ತಾರೆ. ಸಾಬೂನು ವ್ಯಾಪಾರಗಾರರು ಕಾಶಿ, ಗಯ ಮತ್ತು ಶ್ರೀರಂಗಪಟ್ಟಣದ ಸ್ನಾನ ಘಟ್ಟಗಳ ಚಿತ್ರಗಳನ್ನು ತೋರಿಸಿರುತ್ತಾರೆ. ಬಿಸ್ಕತ್ ಕಂಪನಿಯವರು ಚಾಮುಂಡಿ ಬಸವಣ್ಣನ ಚಿತ್ರ ಕೊಟ್ಟಿರುತ್ತಾರೆ. ಈ ಬಿಸ್ಕತ್ತು ತಿಂದರೆ ಬಸವನಷ್ಟು ಶಕ್ತಿ ಬರುತ್ತದೆ ಎಂಬುದರ ಸಂಕೇತವೋ ಏನೋ ಯಾರು ಬಲ್ಲರು?

ದಪ್ಪಗಿರುವವರು ತೆಳುವಾಗುವ, ತೆಳುವಾಗಿರುವವರು ದಪ್ಪನಾಗುವ ಔಷಧಿಗಳಂತೆ ಕುಳ್ಳಾಗಿರುವವರು ಕೇವಲ ಹದಿನೈದು ದಿನ ಅಥವಾ ತಿಂಗಳಿನಲ್ಲಿ ಎತ್ತರವಾಗಬಹುದೆಂದು ಹೇಳುತ್ತಾರೆ. ಮಾನುಷನು ಸ್ವೈಂಧನನಾಗುವ ಈ ದಿವ್ಯೌಷಧಕ್ಕೆ ಅದೆಷ್ಟು ಜನ ಬಲಿ ಬೀಳುವರೋ? ಕುಳ್ಳಾಗಿರುವವರು ಒಂದು ತರಹೆ ಸ್ವೈಚ್ಛಾನು ಸಂಧಾನದಿಂದ ಕೊರಗುತ್ತಿರುತ್ತಾರೆ. ಸ್ನೇಹಿತರ ಹಾಸ್ಯ ಬಾಣಕ್ಕೆ ಗುರಿಯಾಗಿ ಬಳಲಿ ಬವಣೆಗೊಂಡಿರುತ್ತಾರೆ. ಯಾವುದೋ ಔಷಧಿಯಿಂದಲೋ, ಕೆಲವು ಸುಲಭವಾದ ವ್ಯಾಯಾಮಗಳಿಂದಲೋ ಅವರು ಎತ್ತರವಾಗಿ "ದೊಡ್ಡ ಮನುಷ್ಯ"ರಾಗುವದಾದರೆ ಅವರ ಸಂತೋಷಕ್ಕೆ ಪಾರವೆಲ್ಲಿದೆ?

ದೊಡ್ಡ ದೊಡ್ಡ ಹಬ್ಬಗಳು ಬಂದವೆಂದರೆ ಅವೇಕೆ ಬಂದವೋ ಅನ್ನಿಸುವಂತೆ ಮಾಡುತ್ತವೆ ಈ ಜಾಹೀರಾತುಗಳು. ಸಿನಿಮಾಗಳು, ಸೀರೆ ಅಂಗಡಿಯವರು, ಚಪ್ಪಲಿ ಅಂಗಡಿಯವರು, ವಿಶೇಷ ಸಂಚಿಕೆ ಹೊರಡಿಸುವವರು, ಸಾಮಾನ್ಯವಾಗಿ ಮಾರುಕಟ್ಟೆಗೆ ತಮ್ಮ ಸರಕುಗಳನ್ನು ಹಾಕಿರುವವರು ಎಲ್ಲರೂ ನಮ್ಮ ಪರ್ಸ್ ಮೇಲೆ ದಾಳಿಮಾಡುತ್ತಾರೆ. ಶಿವರಾತ್ರಿಯ ಪ್ರಯುಕ್ತ "ಹೂರ್-ಇ-ಹಿಂದ್" ಚಿತ್ರವನ್ನು ತರಿಸಿರುತ್ತಾರೆ. ಅಂದು ನಮ್ಮ ಜಾಗರಣೆಗೆ ಅನುಕೂಲ ಮಾಡಿಕೊಡಲು ಬೆಳಿಗ್ಗೆ ಹತ್ತು ಗಂಟೆಯಿಂದ ಬೆಳಗಿನ ಜಾವ ಮೂರು ಗಂಟೆಯವರೆಗೆ ಐದು ಪ್ರದರ್ಶನಗಳನ್ನು ಏರ್ಪಡಿಸಿರುತ್ತಾರೆ. ರಂಜಾನ್ ಹಬ್ಬಕ್ಕಾಗಿ "ತುಳಸೀ ಜಲಂಧರ" ಚಿತ್ರವನ್ನು ತರಿಸಿ ಅದನ್ನು ನಾವು ಸಕುಟುಂಬ ಸಪರಿವಾರವಾಗಿ ನೋಡಲೇಬೇಕೆಂದು ಒತ್ತಾಯಪಡಿಸಿರುತ್ತಾರೆ. ದೈನ್ಯದಿಂದ ಬೇಡಿಕೊಂಡಿರುತ್ತಾರೆ. ಟಿಕೆಟ್ ಸಿಗದೆ ನಿರಾಶರಾದೇವೆಂದು ಹೆದರಿಕೆ ಹಾಕಿರುತ್ತಾರೆ.

ಸೀರೆ ಅಂಗಡಿಗಳವರಂತೂ ದೊಡ್ಡ ಹಬ್ಬಗಳು ಬಂದಾವೆ ಅಂತ ಕಾದಿರುತ್ತಾರೆ. ಆ ಹಬ್ಬಕ್ಕಾಗಿಯೇ ಹೊಸ ನಮೂನೆಯ ಸೀರೆಗಳನ್ನು ತರಿಸಿದಾಗಿಯೂ, ಹಬ್ಬಕ್ಕಾಗಿ ಕಡಿಮೆ ಬೆಲೆಗೆ ಕೊಡುವದಾಗಿಯೂ ಆಸೆ ತೋರಿಸಿರುತ್ತಾರೆ. ಬಿಡಿದಿನಗಳಿಗಿಂತ ಹಬ್ಬದದಿನಗಳಲ್ಲಿ ಸೀರೆಗಳ ಬೆಲೆ ಒಂದಕ್ಕೆ

ಎರಡಾಗಿರುತ್ತದೆ. ಗಿರಾಕಿಗಳು ಅಂಗಡಿಗೆ ಬಂದು ಘೇರಾಯಿಸಿದರೆ ತನ್ನಲ್ಲಿದ್ದ ಸರಕುಗಳನ್ನು ಕಡಿಮೆ ಬೆಲೆಗೆ ಮಾರಲು ಅವರೇನು ಹುಚ್ಚರೇ ?

ಈ ಹಬ್ಬಗಳಿಗಾಗಿ ಚಕ್ರಬಂಧ ಸ್ಪರ್ಧೆಯವರು, ಅಂಕೆಗಳ ಸ್ಪರ್ಧೆಯವರು, ನಮ್ಮ ಹಿಮ್ಮಣಿ ಸಡಿಲಿಸಲು ಹೊಂಚು ಹಾಕಿರುತ್ತಾರೆ. ವಿಶೇಷ ಸಂಚಿಕೆಯವರು ತಮ್ಮ ವಿಶೇಷ ಸಂಚಿಕೆಗಳ ಬಗ್ಗೆ ಜಾಹೀರಾತುಗಳನ್ನು ಕೊಟ್ಟಿರುತ್ತಾರೆ. ಆ ಸಂಚಿಕೆ ಓದಿದರೆ ಇಹಪರಗಳೆರಡಕ್ಕೂ ಸಾಧನವಾಗುವದಂತೆ. ದೀಪಾವಳಿಗೆ ಬರುವ ಅಳಿಯನಿಗೆ ಆ ವಿಶೇಷ ಸಂಚಿಕೆ ಒಂದನ್ನು ಉಡುಗೊರೆಯಾಗಿ ಕೊಡಬಹುದಂತೆ. ಎಂಟಾಣೆಯೋ, ಒಂದು ರೂಪಾಯಿಯೋ ಕೊಟ್ಟು ಒಂದು ವಿಶೇಷ ಸಂಚಿಕೆಯನ್ನು ಕೊಂಡು ಅಳಿಯನನ್ನು ತೃಪ್ತಿಪಡಿಸಿ ನಾವು ಸಾಗಹಾಕುವದಾದರೆ ಅದೆಷ್ಟು ಮಾವಂದಿರು ಈ ಭೂಮಿಯು ಸ್ವರ್ಗಸಮಾನವಾದ್ದೆಂದು ಹೇಳಿಯಾರು ?

ದೀಪಾವಳಿಗೆ ಬಂದ ನನ್ನ ಅಳಿಯನಿಗೆ ವಿಶೇಷ ಸಂಚಿಕೆಯೊಂದನ್ನು ಹೋದ ವರ್ಷ ಉಡುಗೊರೆಯಾಗಿ ಕೊಟ್ಟಿದ್ದೆ. ಅವನು ಆ ಸಂಚಿಕೆಯನ್ನೆಲ್ಲ ಒಂದು ಸಾರಿ ತಿರುವಿಹಾಕಿ "ಮಾವಯ್ಯ ಇದು ನೋಡು" ಎಂದ. "ದೀಪಾವಳಿಗೆ ಬರುವ ನಿಮ್ಮ ಅಳಿಯನಿಗೆ ಈ ಗಡಿಯಾರ ಕೊಡಿ. ಬೆಲೆ ೧೫೦ ರೂಪಾಯಿಗಳು. ದೀಪಾವಳಿ ಹಬ್ಬಕ್ಕೆಂದು ಕೇವಲ ೧೨೫ ರೂಪಾಯಿಗಳಿಗೆ ಕೊಡುತ್ತೇವೆ" ಎಂದು ಅದರಲ್ಲಿ ಬರೆದಿತ್ತು. "ಮಾವಯ್ಯ ನೀನೇಕೆ ೨೫ ರೂಪಾಯಿಗಳನ್ನು ಉಳಿಸಿಕೊಳ್ಳಬಾರದು" ಅಂತ ಹೇಳಿದ ಅವನ ಪರ್ಯಾಯ ಸೂಚನೆಗೆ ಮನ್ನಣೆ ಕೊಟ್ಟೆನೆಂದು ಹೇಳಬೇಕಾಗಿಲ್ಲವಷ್ಟೆ ?

ರೇಸ್‌ನಲ್ಲಿ ಹಣ ಗಳಿಸಲು, ಯಾರ ಮೇಲೆ ಮನಸ್ಸಿರುವುದೋ ಅವರನ್ನು ಒಲಿಸಿಕೊಳ್ಳಲು, ದುಷ್ಟಗ್ರಹಗಳ ಕೋಪಾಲನವನ್ನು ಕಡಿಮೆ ಮಾಡಲು ಯಕ್ಷಿಣೀ ಉಂಗುರಗಳ ಜಾಹೀರಾತುಗಳನ್ನು ನಾವು ಕಾಣಬಹುದು. ಕಾಮಧೇನು, ಕಲ್ಪವೃಕ್ಷವಾದ ಈ ಉಂಗುರಗಳನ್ನು ನಾವು ಕೇವಲ ಒಂದೆರಡು ರೂಪಾಯಿಗಳಿಗೆ ಪಡೆಯಬಹುದು.

ದೂರದಲ್ಲಿರುವವರನ್ನು ತೋರಿಸುವ, ನಿಧಿ ನಿಕ್ಷೇಪಗಳನ್ನು ಕಾಣಿಸುವ ಯಕ್ಷಣೀ ಕನ್ನಡಿಗಳನ್ನು ಮಾರುತ್ತಾರೆ. ಮಕ್ಕಳಿಲ್ಲದಿದ್ದವರಿಗೆ ಮಕ್ಕಳಾಗಲು ತಾಯಿತಗಳು ಬೇರೆ ಸಿಕ್ಕುತ್ತವೆ. ಹೆಣ್ಣುಮಗು ಬೇಕಾದವರೆ ಮೂರು ರೂಪಾಯಿನ ತಾಯಿತ ಕಟ್ಟಿಕೊಳ್ಳಬೇಕೆಂದೂ, ಗಂಡುಮಗು ಬೇಕಾದವರೆ ಐದು ರೂಪಾಯಿನ ತಾಯಿತ ಕಟ್ಟಿಕೊಳ್ಳಬೇಕೆಂದೂ ತಿಳಿಸಿರುತ್ತಾರೆ.

ಜಾಹೀರಾತಿನ ಪ್ರಪಂಚ ಅತಿವಿಶಾಲವಾದುದು. ಅದು ಇಂದಿನ ನಾಗರೀಕತೆಯ ಮಾಪುಗೋಲಾದರೂ, ಜಗತ್ತು ಎತ್ತ ಧಾವಿಸಿದೆಯೆಂಬುದನ್ನು ಸ್ಪಷ್ಟವಾಗಿ ತೋರಿಸುವ ರನ್ನಗನ್ನಡಿಯೂ ಆಗಿದೆ.

# ಅಮೆರಿಕ ಯಾತ್ರೆ

" ರೀ, ಯಾರೋ ಬಂದೀದಾರೆ."

" ರಾಯರು ಮಲಗಿದಾರೆ ಅಂತ ಹೇಳು."

" ಏನೇ ಆಗಲಿ ನಿಮ್ಮನ್ನು ನೋಡಲೇಬೇಕಂತೆ."

ಇದು ನನಗೂ ನನ್ನ ಹೆಂಡತಿಗೂ ಒಂದು ಭಾನುವಾರ ಬೆಳಗಿನ ಜಾವ ಒಂಬತ್ತು ಗಂಟೆ ಹೊತ್ತಿನಲ್ಲಿ ನಡೆದ ಸಂಭಾಷಣೆ. ನನಗೆ ಭಾನುವಾರದ ರಜ ಬಿಟ್ಟು ಬೇರೆ ರಜಕ್ಕೆ ಗತಿಯಿಲ್ಲ. ಆ ದಿನ ಎಲ್ಲ ವಿಲಾಸಿಗಳಂತೆ ಬೆಳಿಗ್ಗೆ ಹತ್ತು ಗಂಟೆಯುವರೆಗೆ ಮಲಗಲೇಬೇಕೆಂದು ನನ್ನ ಹಟ. ಆದರೆ ನನ್ನ ಹಟಕ್ಕೆ ಎಂದೂ ಮನ್ನಣೆ ದೊರಕಿಲ್ಲ. ಒಂದಲ್ಲ ಒಂದು ಕಾರಣದಿಂದ ನನ್ನನ್ನು ಭಾನುವಾರ ಬೆಳಿಗ್ಗೆ ಹಾಸಿಗೆಯಿಂದ ಎಬ್ಬಿಸಬೇಕೆಂದು ಅನೇಕರ ಒಳಸಂಚು. ತೆರೆದ ಕಣ್ಣುಗಳನ್ನು ಉಜ್ಜುತ್ತ ಮನಸ್ಸಿನಲ್ಲಿಯೇ ಬಯ್ಯುತ್ತಾ ಹೊರಕ್ಕೆ ಬಂದೆ. ನನ್ನನ್ನು ಎಬ್ಬಿಸಲು ಕಾರಣರಾದ ಆ ಜನರನ್ನು ನೋಡಿ ದೊಡನೆಯೇ ನನ್ನ ಹೃದಯ ಸ್ಫೋಟನವಾಗುತ್ತೇನೋ ಅಂತ ತಿಳಿದೆ.

---

* ಶ್ರೀ ನಾಡಿಗ ಕೃಷ್ಣಮೂರ್ತಿಯವರು ಪತ್ರಿಕೋದ್ಯಮದಲ್ಲಿ ಶಿಕ್ಷಣ ಪಡೆಯಲು ಅಮೆರಿಕಕ್ಕೆ ಹೋಗುವ ಸಮಯದಲ್ಲಿ ಅನೇಕ ಜನರು ನಾಡಿಗೇರ ಕೃಷ್ಣರಾಯರು ಅಮೆರಿಕಕ್ಕೆ ಹೋಗುತ್ತಾರೆಂದು ತಪ್ಪಾಗಿ ತಿಳಿದುಕೊಂಡಿದ್ದರು. ಇಬ್ಬರ ಹೆಸರಿನಲ್ಲಿಯೂ ಹೆಚ್ಚಿನ ಸಾಮ್ಯ ಇದ್ದುದರಿಂದ ಅನೇಕ ಇಕ್ಕಟ್ಟಿನ ಪ್ರಸಂಗಗಳು ಒದಗಿದವು. ಅದರ ವಿವರಣೆ ಈ ಹರಟೆ.

ಬಂದಿದ್ದವರಲ್ಲಿ ಹರಕಚಂದ್ (ಮಾರ್ವಾಡಿ) ದಸ್ತಗಿರಿಖಾನ್ (ಪಠಾಣ್) ವೆಂಕಟಾಚಲಶೆಟ್ಟಿ (ಪಂಸಾರಿ ಅಂಗಡಿ) ಉಡುಪಿ ಕೃಷ್ಣಪ್ಪ (ಹೋಟಲ ಮಾಲಿಕ) ಈ ಶತ್ರು ಚತುಷ್ಟಯದಲ್ಲಿ ಯಾರೊಬ್ಬರು ಬಂದಿದ್ದರೂ ನಾನು ಎದಿರಿಸುವ ಸಾಮರ್ಥ್ಯ ಉಳ್ಳವನಾಗಿರಲಿಲ್ಲ. ಇಂಗ್ಲೀಷಿನಲ್ಲಿ ಒಂದು ನಾಣ್ಣುಡಿಯಿದೆ "ದುರಂತಗಳು ಒಂದೊಂದಾಗಿ ಬರದೆ ಸಾಮೂಹಿಕವಾಗಿ ಬರುತ್ತವೆ" ಅಂತ. ನನ್ನ ಗತಿಯೂ ಹೀಗೇ ಆಯಿತು. ಈ ನಾಲ್ಕು ಜನ ಸಾಲಗಾರರನ್ನು ಹೇಗೆ ಇದಿರಿಸಬೇಕೆಂಬುದೇ ನನ್ನ ಸಮಸ್ಯೆಯಾಯಿತು.

ಅಂದು ನಾನು ಬೆಳಗಿನ ಜಾವ ಹತ್ತು ಗಂಟೆಯವರೆಗೆ ಮಲಗಬೇಕೆಂದು ನಿರ್ಧರಿಸಿದ ಬಗ್ಗೆ ಒಂದು ಪ್ರಬಲವಾದ ರಾಜಕಾರಣವೂ ಅಡಗಿದೆ. ಹಾಲು ಮೊಸರು, ಬೆಣ್ಣೆ, ತರಕಾರಿ ಮುಂತಾದ ಚಿಲ್ಲರೆ ಸಾಲಗಾರರಿಗೆ ಆ ದಿನ ಅವರ ಬಾಕಿ ಕೊಡುತ್ತೇನೆಂದು ಯಾವುದೋ ಮನೋದೌರ್ಬಲ್ಯದ ಸಮಯದಲ್ಲಿ ವಚನ ಕೊಟ್ಟಿದ್ದೆ. ಅವರೆಲ್ಲ ಆಗಲೇ ಬಂದು ದಾಳಿಮಾಡಿ ಹೋಗಿದ್ದರು. ನನ್ನ ಹೆಂಡತಿ "ರಾಯರು ಮಲಗಿದ್ದಾರೆ" ಅಂತ ದೊಡ್ಡ ಮನುಷ್ಯರ ಹೆಂಡತಿಯರು ಹೇಳುವ ಹಾಗೆ ಹೇಳಿ ಅವರನ್ನೆಲ್ಲಾ ಸಾಗುಹಾಕಿದ್ದಳು.

ಸೇಟ್ಜಿಯು "ಜಯ ಗೋಪಾಲ್" ಮಾಡಿದ. ಪಠಾನ "ಅಸ್ಸಲಾಂ ಆಲೇಕುಂ" ಎಂದ. ಶೆಟ್ಟಿ "ದಂಡಮು" ಎಂದ. ಉಡುಪಿ ಕೃಷ್ಣಪ್ಪ "ಓಯ್ ಎಂಥದು ಮಾರಾಯ್ರೆ" ಎಂದ. ಒಬ್ಬರೂ ಮಾತನಾಡಲಿಲ್ಲ. ಎಲ್ಲರೂ ನಗುತ್ತಿದ್ದರು. ನನ್ನ ಅಸಹಾಯಕ ಪರಿಸ್ಥಿತಿ ನೋಡಿಯೇ ಅವರು ನಗುತ್ತಿರಬೇಕೆಂದು ಗ್ರಹಿಸಿದೆ. ಉಡುಪಿ ಕೃಷ್ಣಯ್ಯ ಮಾತಿಗಾರಂಭಿಸಿದ, "ಒಳ್ಳೇದು ಮಾರಾಯ್ರೆ, ನೀವು ಅಮೇರಿಕ ಹೋಯ್ತೀರ, ಚಂದ ಆತು, ಕುಸಿ ಆತು."

ನಿದ್ರೆಯಲ್ಲಿದ್ದವರಿಗೆ ಫಳೀರನೆ ಕೆನ್ನೆಗೆ ಎರಡು ಬಿಟ್ಟರೆ ಜ್ಞಾನೋದಯ ವಾಗುವಂತೆ ನನಗೂ ಏನೋ ಹೊಳೆಯಿತು. ಪರಸ್ಥಳದಲ್ಲಿರುವ ಕೆಲವು ಜನ ಸ್ನೇಹಿತ ಸಾಲಗಾರರು ನಾನು ಅಮೆರಿಕಕ್ಕೆ ಹೋಗುತ್ತೇನೆಂದು ತಿಳಿದು ನನ್ನನ್ನು ಅಭಿನಂದಿಸಿ ತಮಗೆ ಕೊಡಬೇಕಾದ ಸಾಲವನ್ನು ನಾನು ಹಡಗು

ಹತ್ತುವದರೊಳಗೆ ತೀರಿಸಬೇಕೆಂದು ತಿಳಿಸಿದ್ದರು ಅದೇ ತಪ್ಪು ತಿಳುವಳಿಕೆಯ ಅಂಟುರೋಗವು ಇವರಿಗೂ ತಗುಲಿದೆಯೆಂದು ತಕ್ಷಣವೇ ತಿಳಿದೆ.

ಆ ನಾಲ್ವರ ಕೈಯುಲ್ಲೂ ಒಂದೊಂದು ದಿನಪತ್ರಿಕೆ. ಅದರಲ್ಲಿ ಶ್ರೀನಾಡಿಗ ಕೃಷ್ಣಮೂರ್ತಿಗಳು ಅಮೆರಿಕಕ್ಕೆ ಹೋಗುವದಕ್ಕೆ ಚಂದಾ ಕೊಟ್ಟವರ ಹೆಸರುಗಳು ಇದ್ದವು. "ನೋಡಿ ಮಾರಾಯ್ರೆ. ಇಷ್ಟು ದುಡ್ಡು ಬಂದಿದೆ ನಿಮಗೆ, ನಮ್ಮ ಬಾಕಿ ಕೊಟ್ಟು ಬಿಡೋದಾ" ಉಡುಪಿ ಕೃಷ್ಣಪ್ಪ ಹೇಳಿದ. ಉಳಿದವರೂ ಅವನ ಹೇಳಿಕೆಗೆ ಸಮ್ಮತಿ ಸೂಚಿಸಲು ಕೌಲೆತ್ತಿನಂತೆ ತಲೆ ಅಲ್ಲಾಡಿಸಿದರು.

"ನೋಡಿ ಅಮೆರಿಕಕ್ಕೆ ಹೋಗುವವನು ನಾನಲ್ಲ. ನಾಡಿಗ ಕೃಷ್ಣಮೂರ್ತಿಗಳು. ನನ್ನ ಹೆಸರು ನಾಡಿಗೇರ ಕೃಷ್ಣರಾಯ. ನನಗೂ ಅವರಿಗೂ ಯಾವ ಸಂಬಂಧವೂ ಇಲ್ಲ" ಎಂತ ಹೇಳಿದೆ. ಮತ್ತು ಈ ಪಾಪಿಗಳಿಂದ ಪಾರಾಗಲು ಅಮೆರಿಕ ಏಕೆ ನ್ಯೂಜಿಲೆಂಡ್ ಅಥವಾ ಐಸ್ಲೆಂಡಿಗೆ ಹೋಗಲು ಸಹ ಸಿದ್ಧನಿದ್ದೆ, ಎಂತ ಮನಸ್ಸಿನಲ್ಲಿಯೇ ಅಂದುಕೊಂಡೆ. ನನ್ನ ತರ್ಕ ಅವರಿಗೆ ಹಿಡಿಯಲಿಲ್ಲವೆಂಬುದು ಅವರಲ್ಲಿ ಒಬ್ಬೊಬ್ಬರು ಒಂದೊಂದು ದಿಕ್ಕಿನಲ್ಲಿ ನೋಡಿದ ಮೇಲೆ ನನಗೆ ಗೊತ್ತಾಯಿತು. ಸಾಲಗಾರರ ನಿಯೋಗದ ನಾಯಕ ಕೃಷ್ಣಪ್ಪ ಮತ್ತೆ ಆರಂಭಿಸಿದ. "ನಿಮಗೆ ಸಾವಿರಾರು ರೂಪಾಯಿ ಬಂದಿದ್ದುಉಂಟೋ ಅಲ್ವೋ ? ನಮ್ದೆಲ್ಲಾ ಜುಜುಬಿ, ಕೊಟ್ಟಿಡಿ."

ನಾನು ಬಹು ಶ್ರಮಪಟ್ಟು ನಾನು ನಾಡಿಗ ಕೃಷ್ಣಮೂರ್ತಿಯಲ್ಲವೆಂಬುದನ್ನು ಅವರಿಗೆ ಮುಂದಟ್ಟುಮಾಡಿದೆ ಅವರು ನಮ್ಮ ಮನೆಯಿಂದ ಹೊರಡುವ ಸೂಚನೆ ನೋಡಿ ಕೊಂಚ ಸಮಾಧಾನವಾಯಿತು. "ನೀನ್ ಕಿಷ್ನಾಮೂರ್ತಿ ಆಗ್ ಇಲ್ದೀ ಬೀಡ್, ನಮ್ ರೋಕಾ ಈ ಪೈಲೇ ತಾರೀಖ್‌ಗೇ ಕೋಟ್‌ಬೀಡ್" ಎಂತ ಹರಕಚಂದ್ ಹೇಳಿಯೇಬಿಟ್ಟ. ಸಾಮಾನ್ಯವಾಗಿ ಇಂತಹ ಇಕ್ಕಟ್ಟಿನ ಸಂದರ್ಭಗಳಲ್ಲಿ ನಾನು ಸುಳ್ಳು ಹೇಳಿ ಪಾರಾಗುವುದು ಪರಿಪಾಠವಾಗಿತ್ತು. ಆದರೆ ಈದಿನ ನಿಜ ಹೇಳಿ ಪಾರಾಗುವುದು ಸಹ ಕಷ್ಟ ಸಾಧ್ಯವಾಯಿತು.

ಮುಖ ತೊಳೆದ ಶಾಸ್ತ್ರಮಾಡಿ ಕಪ್ಪುಕಾಫಿ ಹೀರುತ್ತಿರುವಾಗ ನಮ್ಮ ಮನೆಯ ಮುಂದೆ ಜಟಕಾಗಾಡಿಯೊಂದು ನಿಂತಿತು. ಅದರೊಳಗಿಂದ ನನ್ನ ಭಾವಮೈದುನ ಟಣ್ಣನೆ ಕೆಳಕ್ಕೆ ಹಾರಿದ. ಎಲ್ಲರಂತೆ ನಾನೂ ಅವನೂ ಯಾವುದೋ ಕ್ಷುಲ್ಲಕ ಕಾರಣಕ್ಕೆ ವಿಪರೀತ ಜಗಳವಾಡಿ, ಅವನ ಮೇಲಿನ ಸೇಡು ತೀರಿಸಿಕೊಳ್ಳಲು ನನ್ನ ಹೆಂಡತಿಗೆ ಕಳೆದ ಐದು ವರ್ಷಗಳಿಂದ ತೌರುಮನೆಯ ಮುಖವನ್ನೇ ತೋರಿಸಿರಲಿಲ್ಲ. ಆತ ಜನಿವಾರ ಮಾರುವ ಗೋಕರ್ಣದ ಬ್ರಾಹ್ಮಣರಂತೆ ಸುಳ್ಳುನಗೆ ಬೀರುತ್ತಾ, ಹಲ್ಲು ಕಿರಿಯುತ್ತಾ ಕುಶಲ ವಿಚಾರಿಸಿದ. ಶತ್ರುಪಕ್ಷವೇ ಬಿಳಿಯ ಬಾವುಟವನ್ನು ಮೊದಲು ಬೀಸಿದ್ದರಿಂದ ಇನ್ನು ಕದನ ನಿಲ್ಲಿಸಬೇಕೆಂದು ನಿರ್ಧರಿಸಿ, ನಾನು ಪ್ರತಿಯಾಗಿ ಹಲ್ಲುಗಿಂಜುತ್ತಾ ಅವನ ಮನೆಯವರೆಲ್ಲರ ಕುಶಲ ವಿಚಾರಿಸಿದೆ. ಉಭಯ ಕುಶಲೋಪರಿ ತರುವಾಯ........ಆತ ದೊಡ್ಡ ಸಂಗೀತಗಾರನಂತೆ ಗಂಟಲು ಸರಿಪಡಿಸಿಕೊಂಡು ಕೆಮ್ಮಿ, ಖ್ಯಾಕರಿಸಿ, "ನೀವು ಅಮೆರಿಕಕ್ಕೆ ಹೋಗುವ ವಿಷಯ ಕೇಳಿ ನಮಗೆಲ್ಲಾ ತುಂಬಾ ಸಂತೋಷವಾಯಿತು. ಏನೋ ನನ್ನ ತಂಗಿಯ ಪುಣ್ಯ............" ಅಂತ ಭಾಷಣಕಾರರು ಸಭಿಕರು ಚಪ್ಪಾಳೆ ಹೊಡೆಯಲಿ ಅಂತ ತಮ್ಮ ಭಾಷಣವನ್ನು ಕೊಂಚ ನಿಲ್ಲಿಸುವಂತೆ ಮಾತು ನಿಲ್ಲಿಸಿ ಮುಂದುವರೆದ.

"ಅದೇ....ನೀವು ಅಮೆರಿಕಕ್ಕೆ ಹೋಗ್ತೀರ, ತಂಗೀನ ಕರೆದುಕೊಂಡು ಹೋಗೋಣ ಅಂತ ಬಂದೆ" ಅಂತ ಹೇಳಿದ.

ನಾನೇ ಮೂರ್ಖನೆಂತ ನನಗೆ ಬಲುಜಂಬ. ಆದರೆ ನನ್ನನ್ನು ಮೀರಿ ಸುವ ಕದೀಮರು ಈ ಜಗತ್ತಿನಲ್ಲಿ ಇನ್ನೂ ಇದ್ದಾರೆ ಎಂಬ ದುಃಖ ನನ್ನನ್ನು ಬಾಧಿಸಿತು. "ಅಮೇರಿಕ ಅಲ್ಲಿಯೇ ಇರಲಿ. ಮೊದಲು ಕಾಫೀ ತೆಗೆದು ಕೊಳ್ಳಿ" ಅಂತ ಹೇಳಿದೆ.

ಅವನಿಗೆ ಸಾದ್ಯಂತವಾಗಿ ನಾನು ಅಮೆರಿಕಕ್ಕೆ ಹೋಗದೆ ಇರುವ ವಿಷಯ ವನ್ನು ವಿಶದಪಡಿಸಿ ಸಂಜೆ ರೈಲಿಗೆ ಅವನನ್ನು ಸಾಗಹಾಕಿದೆ. ಮಾರನೇದಿನ ಆಫೀಸಿಗೆ ಹೋದೆ. ನನ್ನ ಅಮೆರಿಕ ಪ್ರವಾಸದ ಕಮರುವಾಸನೆ ಹಿಡಿದು—

ನನ್ನ ಕೆಲಸ ಖಾಲೀಬೀಳುತ್ತದೆಂದು ತಿಳಿದು—ಎಷ್ಟೋ ಜನ ಅರ್ಜಿ ಗುಜರಾಯಿಸಿಕೊಂಡಿದ್ದರು. ತಮ್ಮ ಅರ್ಜಿಯಲ್ಲಿ "ಯುದ್ಧದಲ್ಲಿ ಕಷ್ಟಪಟ್ಟ ಮತ್ತು ಉಪವಾಸ ಬಿದ್ದ ಅನುಭವ ನಮಗಿದೆ. ಪತ್ರಿಕೋದ್ಯಮಿಯಾಗಿ ಉಪವಾಸ ಮಾಡಬೇಕಾದ ಸಂದರ್ಭದಲ್ಲಿ ನೈಜ ಯೋಧರಂತೆ ಅದನ್ನು ಇದಿರಿಸಲು ನಾವು ಸಿದ್ಧರಿದ್ದೇವೆ" ಅಂತ ಬರೆದುಕೊಂಡಿದ್ದರು.

ಮನೆಗೆ ಹೋದಕೂಡಲೇ ಈ ಅಮೆರಿಕ ಕತೆ ನನ್ನ ಹೆಂಡತಿ ಕಿವಿಗೂ ಬಿದ್ದಿದೆಯೆಂಬುದು ತಿಳಿಯಬಂದಿತು. ಕತ್ತಲು ಮನೆಯಲ್ಲಿ ಇದ್ದ ಇನ್ನಷ್ಟು ಕತ್ತಲು ಕೋಣೆಯೊಂದರಲ್ಲಿ ಮಲಗಿದ್ದಳು. ಹಿಂದೆ ಕೈಕೆ ಮುಂತಾದ ಪುರಾಣಪ್ರಸಿದ್ಧ ಸ್ತ್ರೀಯರು ಮಾಡಿದಂತೆ ಹುಲುಮಾನವಳಾದ ನನ್ನ ಹೆಂಡತಿಯು ಮಾಡುತ್ತಿರುವದನ್ನು ನೋಡಿ ಚಕಿತನಾದೆ. 'ಹೂಂ' ಅಂದದ್ದಾಯಿತು.

"ಏನೂ ಇಲ್ಲ, ನೀವು ಅಮೆರಿಕದಿಂದ ಬರುವಾಗ ನಿಮ್ಮ ಲಗೇಜಿನ ಜೊತೆಗೆ ಬಿಳಿಯ ಹೆಣ್ಣನ್ನು ತರಕೂಡದು" ಅಂತ ಸ್ತ್ರೀ ಸಹಜವಾದ ಸವತಿ ಮಾತ್ಸರ್ಯದಿಂದ ಹೇಳಿದಳು. ನಿಜಕ್ಕೂ ನನಗೆ ನಗು ಬಂದಿತು.

ಕರಿ ಹೆಣ್ಣುಗಳು ಸಹ ನನ್ನ ಬೆನ್ನು ಬೀಳದೆ ಇರುವಾಗ ಇನ್ನು ಅಮೆರಿಕದ ಶ್ವೇತವರ್ಣೀಯರು ನಮ್ಮ ಹುಡಗೀರಿಗಿಂತ ಮೂರ್ಖರೇ? ಈ ಭಾವವನ್ನು ಸಹ ಅವಳಿಗೆ ತಿಳಿಸಿದೆ. ಮತ್ತೆ ಆಲೋಚನೆಮಾಡಿ ಹೇಳಿದಳು, "ಆ ದೇಶದಲ್ಲಿ ನೀಗ್ರೊ ಜನ ಹೆಚ್ಚಾಗಿದ್ದಾರೆ. ಅವರಲ್ಲಿ ಯಾವಳಾದರೂ ಬೆನ್ನು ಹತ್ತಿದರೆ" ತಡೆಯಲಾರದೆ ನಾನು ಮಾರುತ್ತರ ಕೊಟ್ಟೆ, "ನೀನೇ ಇರುವಾಗ ಅಲ್ಲಿಂದ ಏಕೆ ನೀಗ್ರೊ ಹೆಣ್ಣನ್ನು ತರಬೇಕು?" ಅಂತ. ಅಂದಿನಿಂದ ನನ್ನ ಹೆಂಡತಿ ಮೂರು ದಿನ ಉಪವಾಸ ಮಾಡಿ, ಬದಲಾವಣೆಗೆಂದು ಬರೀ ಹಾಲು ಹಣ್ಣಿನ ಮೇಲೇ ಇದ್ದಳು.

ಪೇಟೆಯಲ್ಲಿ ನನಗಾಗದ ಜನ ಸಿಕ್ಕಿದರು. ಅವರ ಸಂತೋಷ ಹೇಳತೀರದು. ಏನಾದರೂ ಕಾರಣದಿಂದ ಈ ದೇಶ ಬಿಟ್ಟು ನಾನು ತೊಲಗುತ್ತೇ

ನೆಂದು ನನಗೆ ಕಾಫ್ಯಾದಿ ಪಾನೀಯಗಳನ್ನು ಕೊಡಿಸಿದರು. ನಾನು ಚಾಚೂ ಮಾತನಾಡದೆ ಸುಮ್ಮನಿದ್ದೆ.

ಮಿತ್ರರು ಭೇಟಿಯಾಗಿ "ಎಲೋ ಒಳ್ಳೇ ಚಾನ್ಸ್ ಹೊಡೆದೆ ನಮಗೆ ತಿಂಡಿ ಕೊಡಸೋ" ಅಂತ ಗಂಟುಬಿದ್ದರು.

ಹೆಸರಿನಲ್ಲೇನಿದೆ ? ಅಂತ ನಾನು ಮೂಗು ಮುರಿಯುತ್ತಿದ್ದೆ. ಅದಕ್ಕೇ ಸಿರಿವಂತರು ಹೆಸರಿಗಾಗಿ ಅಷ್ಟು ಪಡಿಪಾಟ ಬೀಳುತ್ತಾರೆ.

# ಮುನ್ನುಡಿಗಳು

ಮುನ್ನುಡಿ ವ್ಯಾಧಿಯು ಇತ್ತೀಚೆಗೆ ಬಹಳವಾಗಿ ಹಬ್ಬಿ ಅದೊಂದು ಸಾಂಕ್ರಾಮಿಕ ರೋಗವೋ ಎಂಬ ದಿಗಿಲು ನನಗುಂಟಾಗಿದೆ. ಸುಮಂಗಲಿಗೆ ಮಂಗಳಸೂತ್ರವು ಹೇಗೋ ಪುಸ್ತಕಕ್ಕೆ ಮುನ್ನುಡಿಯು ಹಾಗಿದೆ. ಅದಿಲ್ಲ ದಿದ್ದರೆ ಪುಸ್ತಕವು ಏನೋ ಒಂದು ತರಹ ಬಿಕೋ ಅನ್ನುತ್ತೆ. ಈ ಮುನ್ನುಡಿ ಹಾಕಿಸುವುದರಲ್ಲಿಯೂ ಒಂದು ರೀತಿಯ ರಾಜಕಾರಣ ಅಡಕವಾಗಿದೆ. ನೌಕರಿ ಬೇಟೆಗೆ ಹೊರಟವನು ಶಿಫಾರಸು ಪತ್ರಗಳೆಂಬ ಅಸ್ತ್ರಗಳಿಂದ ಸಜ್ಜಿತ ನಾಗಿ ಹೇಗೆ ಹೊರಡುತ್ತಾನೋ ಹಾಗೆ ಗ್ರಂಥಕಾರನು 'ದೊಡ್ಡವ'ರೊಬ್ಬರ ಮುನ್ನುಡಿಯೊಡನೆ ಪುಸ್ತಕ ಮಾರಾಟಕ್ಕಾಗಿ ಪೇಟೆಗೆ ತೆರಳುತ್ತಾನೆ. ಈ ದೊಡ್ಡವರ ಕೊಡಲಿ ಗುರುತೊಂದಿದ್ದರೆ ತನ್ನ ಪ್ರತಿಗಳನ್ನು ಬಿಸಿದೋಸೆಗಳಂತೆ ಬಹು ಸುಲಭವಾಗಿ ಮಾರಬಹುದೆಂದು ತಿಳಿದಿರುತ್ತಾನೆ.

ನನ್ನ ವೈಯ್ಯಾಕರಣೀಯ ಮಿತ್ರರೊಬ್ಬರು ಮುನ್ನುಡಿಯನ್ನು ಮುದ್+ ನುಡಿ=ಮುನ್ನುಡಿ, ಅಂತ ಪದ ವಿಭಾಗಮಾಡಿದ್ದಾರೆ. ಇದು ಸರಿಯೇ. ಏಕೆಂದರೆ ಏನೋ ಮುದ್ದುಮುದ್ದಾಗಿ ಅಥವಾ ಮುದ್ದೆ ಮುದ್ದೆಯಾಗಿ ಬರೆದು ಕೊಂಡಿದ್ದಾರೆಂದು ನಾವು ಬಹು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು.

ಅನೇಕ ಸಂದರ್ಭಗಳಲ್ಲಿ ಈ ಮುನ್ನುಡಿಗಳು "ಅಶ್ವತ್ಥಾಮ ಹತಃ ಕುಂಜರಃ" ಆಗಿರುತ್ತೆ. ಅಂದರೆ ಮನಸ್ಸಿಲ್ಲದಿದ್ದರೂ ಏನನ್ನೋ ಅಸ್ಪಷ್ಟ ವಾಗಿ ಇತರರಿಗೆ ತಿಳಿಯದಂತೆ ಹೇಳುವುದು. ಬರೆದಿರುವ ಪುಸ್ತಕ ಕಗ್ಗವೆಂದು

ಆತ್ಮಸಾಕ್ಷಿಯಾಗಿ ತಿಳಿದಿದ್ದರೂ, ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಮುನ್ನುಡಿ ಬರೆಯಲೊಪ್ಪಿದ ತಪ್ಪಿಗೆ, ಕಾಟಾಚಾರಕ್ಕಾಗಿ, ಜಾರಿಸಿ, ಇಳಿಜಾರಿಸಿ, ತೇಲಿಸಿ ಕೊನೆಗೆ ತಮ್ಮ ಕೊಡಲಿ ಗುರುತನ್ನು ಹಾಕುತ್ತಾರೆ.

ಮುನ್ನುಡಿಯಲ್ಲಿ ಹೊಗಳಲ್ಪಟ್ಟಿರುವ ಗ್ರಂಥಕಾರನ ಸರಳಶೈಲಿ, ವಿಚಾರ ಪ್ಲವಪೂರಿತವಾದ ವಿಷಯಗಳು, ಹೃದಯಂತರಾಳದಲ್ಲಿ ಅಡಗಿರುವ ಭಾವನೆಗಳನ್ನು ಬಡಿದೆಬ್ಬಿಸುವ ಸಮಯ ಸನ್ನಿವೇಶ, ಇತ್ಯಾದಿಗಳು ಅಲ್ಲಿ ಇರುವುದೇ ಇಲ್ಲ. ಇಂತಹ ಸಂದರ್ಭದಲ್ಲಿ ಈ ಅಂಶಗಳನ್ನು ತೋರಿಸಿ ಕೊಟ್ಟವರಿಗೆ ೧೦೦ ರೂಪಾಯಿ ಬಹುಮಾನ ಕೊಡುವುದಾಗಿ 'ತಂದೆನಾಡು' ಪತ್ರಿಕೆಯಲ್ಲಿ ಒಂದು ಜಾಹೀರಾತು ಕೊಡಬೇಕೆಂದು ಮನಸ್ಸಾಗುತ್ತದೆ.

ಗ್ರಂಥಕ್ಕಾಗಿ ಮುನ್ನುಡಿಯೋ ಅಥವಾ ಮುನ್ನುಡಿಗಾಗಿ ಗ್ರಂಥವೋ ಎಂಬುದು ಬೀಜವೃಕ್ಷ ಅನ್ಯಾಯದಂತೆ. ಕೆಲವು ಸಾರಿ ಪುಸ್ತಕ ಚಿಕ್ಕದಾಗಿದ್ದರೂ ಮುನ್ನುಡಿ ಬಹಳ ದೊಡ್ಡದಾಗಿರುತ್ತೆ. "ಅಯ್ಯ ಅಡೀ ಸೇರಾದರೆ, ಲಿಂಗ ಪಂಚೇರು" ಎನ್ನುವಂತೆ ಮುನ್ನುಡಿಯೇ ಪುಸ್ತಕಕ್ಕಿಂತ ದೊಡ್ಡದಾಗಿದ್ದು ಓದುಗರನ್ನು ಆಶ್ಚರ್ಯಸಾಗರದಲ್ಲಿ ಮುಳುಗಿಸುತ್ತೆ. ನಿಮಗೆ ತಿಳಿದಿರುವ ಹಾಗೆ ಇದು ಕವಿಯುಗ. ಬಿಳಿಯ ಹಾಳೆಗಳ ಶೀಲಭಂಗ ಮಾಡಬಲ್ಲವರೆಲ್ಲ ಕವಿಗಳೇ. ಮೊಟ್ಟಮೊದಲನೆಯದಾಗಿ ಅವರು ಸಾಹಿತ್ಯರಂಗ ಪ್ರವೇಶಿಸುವುದು ಕವಿತೆಗಳ ಮೂಲಕವೆ. ನನ್ನ ಮಿತ್ರರೊಬ್ಬರು,

> ಗ್ರಂಥಕೆ ಮುನ್ನುಡಿಯೊ ಮುನ್ನುಡಿಗೆ
> ಗ್ರಂಥವೊ ನೀ ಹೇಳೊ ಪುರಂದರ ವಿಠಲಾ ||

ಎಂಬ ಕವಿತೆಯನ್ನು ರಚಿಸಿ ಪುರಂದರ ದಾಸರನ್ನು ಅಣಗಿಸುವ ಸಾಹಸ ಮಾಡಿದ್ದಾರೆ.

ಸಾಮಾನ್ಯವಾಗಿ ಹೆಸರು ಹೊಂದಿದ ಸಾಹಿತಿಗಳೊಬ್ಬರಿಂದ ಗ್ರಂಥಕ್ಕೆ ಮುನ್ನುಡಿ ಬರೆಸುವುದು ಪರಿಪಾಠವಾಗಿದೆ. ಆದರೆ ಈ ಸಾಹಿತಿಗಳು ಮುನ್ನುಡಿ ಬರೆಯಬೇಕೆಂಬ ಗ್ರಂಥಕಾರನ ಬೇಡಿಕೆಯನ್ನು ಬಹಳ ದಿನಗಳಿಂದ ತಳ್ಳುತ್ತ ಬಂದಿರುತ್ತಾರೆ. ಮಗನ ಮುಂಜಿ, ಮಗಳ ಮದುವೆ, ಹೆಂಡತಿಯ

ಟ್ರೈಫಾಯ್ಡ್ (ಈ ಕಾಯಿಲೆ ಹೇಳಿದಲ್ಲಿ ೨೨ ದಿನಗಳ ಅಥವಾ ಅವಕ್ಕೂ ಮೇಲ್ಪಟ್ಟ ದಿನಗಳ ಅವಧಿ ತೆಗೆದುಕೊಳ್ಳಬಹುದು.) ಮುಂತಾದ ನೆಪಗಳನ್ನು ಒಡ್ಡಿ ಬರೆಯದೆ ತಪ್ಪಿಸಿಕೊಂಡಿರುತ್ತಾರೆ. ಗ್ರಂಥಕಾರನಿಗೆ ಇದಕ್ಕೆ ಚಿಕಿತ್ಸಾ ಕ್ರಮವೂ ಗೊತ್ತಿರುತ್ತೆ. ಅಗಲವಾದ ನಗೆ ನಗುತ್ತಾ, ಮುಖದ ಮೇಲಿರುವ ಮಾಂಸಖಂಡಗಳಿಗೆ ಕಸರತ್ತುಮಾಡಿಸಿ, ಮುಖದ ಅಂಗಾಂಗಗಳು ವಿಕಾರ ವಾಗುವಂತೆ ಮಾಡಿ ಹಳೆಯ ಹರಕುಕೋಟಿನ ಒಳಜೇಬಿನಿಂದ ತಾನೇ ಮನೆ ಯಲ್ಲಿ ಬರೆದುಕೊಂಡು ಬಂದಿರುವ ಮುನ್ನುಡಿಯನ್ನು ಅವರ ಮುಂದಿರಿಸಿ ಆರು ಗಜ ಹಿಂದೆ ಸರಿದು ಮುಖ್ಯಪ್ರಾಣನಂತೆ ಕರಜೋಡಿಸಿ, ಶಿರಬಾಗಿಸಿ ನಿಲ್ಲುತ್ತಾನೆ. ಆ ಸಾಹಿತಿ ಆ ಮುನ್ನುಡಿಗೆ ಅರ್ಥಗರ್ಭಿತ ನಗು ನಗುತ್ತ ತನ್ನ ಕೊಡಲಿ ಗುರುತು ಹಾಕುತ್ತಾನೆ.

ಕೆಲವು ಸಂದರ್ಭಗಳಲ್ಲಿ ಮುನ್ನುಡಿಕಾರನಿಗೂ ಗ್ರಂಥಕಾರನಿಗೂ ಪರಿಚ ಯವೇ ಇರುವುದಿಲ್ಲ. ಸರಿ. ಗ್ರಂಥಕಾರ ಒಬ್ಬ ಮಧ್ಯಸ್ತಗಾರನನ್ನು ಪತ್ತೆ ಹಚ್ಚಿ ಅವನ ನೆರವಿನಿಂದ ಮುನ್ನುಡಿಕಾರ ಗ್ರಂಥಕ್ಕೆ ಮುನ್ನುಡಿ ಬರೆಯ ಲೊಪ್ಪುವಂತೆ ಮಾಡುತ್ತಾನೆ. ಮುನ್ನುಡಿಯಲ್ಲಿ "ಗ್ರಂಥಕಾರರ ಪರಿಚಯ ನನಗೆ ಅನೇಕ ವರ್ಷಗಳಿಂದ ಇದೆ. ಅವರು ಇಂತಹ ಉತ್ತಮ ಗ್ರಂಥ ಬರೆಯುವ ಯೋಗ್ಯತೆ ಉಳ್ಳವರೆಂದು ನನಗೆ ತಿಳಿದಿರಲೇ ಇಲ್ಲ. ಇದೊಂದು ದೊಡ್ಡ ಆಚ್ಚರಿ" ಅಂತ ಬರೆದಿರುತ್ತಾರೆ. ಅದನ್ನು ಓದುವವರಿಗೂ ಅದೊಂದು ಅಚ್ಚರಿಯೇ!

ಮುನ್ನುಡಿ ಬರೆಯಲು ಹಾತೊರೆಯುತ್ತಿರುವ ಮಹನೀಯರು ನಮ್ಮಲ್ಲಿ ಬೇಕಾದಷ್ಟು ಜನರಿದ್ದಾರೆ. ಬರೆಯುವುದಕ್ಕೆ ಅವಕಾಶ ಸಿಕ್ಕಿತೆಂದು ಸ್ವಪ್ರಶಂ ಸೆಗೆ ಆರಂಭಿಸಿ ಬಿಡುತ್ತಾರೆ. ತಾವು ನೋಡಿದ ದೊಡ್ಡ ಮನುಷ್ಯರು, ಓದಿದ ಅಥವಾ ಓದದೆ ಇರುವ ಉದ್ಗ್ರಂಥಗಳ ಪಟ್ಟಿ, ತಾವು ಬರೆದಿರುವ ಅಥವಾ ಬರೆಯಬೇಕೆಂದಿರುವ ಪುಸ್ತಕಗಳ ಲಿಸ್ಟ್ ಮುಂತಾದವುಗಳ ವಿವರಣೆಯನ್ನೇ ತುಂಬಿಸಿಬಿಡುತ್ತಾರೆ. ಅವರಲ್ಲಿ ಯಾವ ಪುಸ್ತಕಕ್ಕೆ ಮುನ್ನುಡಿ ಬರೆಯ ಬೇಕಾಗಿತ್ತೋ ಅದರ ವಿಷಯವಾಗಿ ಒಂದಕ್ಷರವನ್ನೂ ಬರೆದಿರುವದಿಲ್ಲ.

ಉಪಾಧ್ಯಾಯನೊಬ್ಬನು ತನ್ನ ಹಳೆಯ ವಿದ್ಯಾರ್ಥಿಯೊಬ್ಬನಿಗೆ ಅನಿವಾರ್ಯವಾಗಿ ಹೇಳುವ ಒಂದೆರಡು ಒಳ್ಳೆಯ ಮಾತುಗಳಿದ್ದಂತೆ ಇರುತ್ತೆ ಇವುಗಳ ಧಾಟಿ.

ಗ್ರಂಥಕಾರನು ಕೆಲವು ಸಾರಿ ತನ್ನ ಪುಸ್ತಕದಲ್ಲಿ ತಾನೇ ಮುನ್ನುಡಿ ಬರೆದುಕೊಂಡಿರುತ್ತಾನೆ. ಅದರಲ್ಲಿ ಆವನ ಊರಿನ ಮಹನೀಯರೊಬ್ಬರು (ಅವನ ಕಾಟ ತಡೆಯಲಾರದೆ) ಪುಸ್ತಕ ಪ್ರಕಟಣೆಗಾಗಿ ೫೦ ರೂಪಾಯಿಗಳನ್ನು ಉದಾರ (?) ಹೃದಯದಿಂದ ಕೊಟ್ಟ ವಿಷಯ, ಮುದ್ರಣಕಾರನ ಕೆಲಸ, ಈ ಪುಸ್ತಕ ಓದಿದ ಮಹನೀಯರು ಉತ್ತೇಜನ ಕೊಟ್ಟಲ್ಲಿ ಇನ್ನೂ ಕೆಲವಾರು ಪುಸ್ತಕಗಳನ್ನು ಬರೆಯುವ ಸೂಚನೆಯ ಬೆದರಿಕೆ ಇತ್ಯಾದಿಗಳನ್ನು ಬರೆದುಕೊಂಡಿರುತ್ತಾನೆ.

ಸರ್ಕಾರದವರು ಮುನ್ನುಡಿ ಹತೋಟಿ ಆಜ್ಞೆ (ಕಂಟ್ರೋಲ್ ಆರ್ಡರ್) ಯನ್ನು ಜಾರಿಗೆ ತಂದು ಇದು ಇಂದಿನ ಯುದ್ಧ ಸಮಯದಲ್ಲಿಯೂ ಅಲ್ಲದೆ ಮುಂದಿನ ಅಂಚೆ ಯುದ್ಧಸಮಯ **(Post War Period)** ದಲ್ಲಿಯೂ ಅನ್ವಯಿಸುವಂತೆ ಮಾಡಬೇಕು.

ಗ್ರಂಥಕಾರನು ತಾನು ಬರೆದುಕೊಂಡಿರುವ ಮುನ್ನುಡಿಯಲ್ಲಿ ಆ ಗ್ರಂಥವನ್ನು ಬರೆಯಲು ಕಾರಣ, ಗ್ರಂಥದಲ್ಲಿ ಅಳವಡಿಸಲ್ಪಟ್ಟಿರುವದೆಂದು ಭಾವಿಸಿರುವ ವಿಷಯಗಳ ವಿಹಂಗಮಾವಲೋಕನ ಮುಂತಾದವನ್ನು ಬರೆದಿರುತ್ತಾನೆ. ಆತ ಆ ರೀತಿ ಬರೆಯದಿದ್ದರೆ ಜನಕ್ಕೆ ತಿಳಿಯುವುದಾದರೂ ಹೇಗೆ? ಆ ವಿಷಯಗಳು ಆ ಪುಸ್ತಕದಲ್ಲಿ ಪ್ರತಿಪಾದಿತವಾಗಿಲ್ಲದಿರುವುದೇ ಬಹಳ ಸ್ವಾರಸ್ಯ ಸಂಗತಿ.

ಕರಡುಪ್ರತಿ ಓದಿದವರ ಪಟ್ಟಿ, ಸ್ಫೂರ್ತಿಕೊಟ್ಟವರ ಸಹಸ್ರನಾಮ, ಇವನು ರಾತ್ರಿ ಪುಸ್ತಕ ಬರೆಯುವದರಲ್ಲಿ ತೊಡಗಿದ್ದಾಗ ಇವನ ಹೆಂಡತಿ ನಿದ್ರೆಗೆಟ್ಟ ವಿಷಯ ಮುಂತಾದ ಖಾಸಗಿ ಸಂಗತಿಗಳನ್ನೂ ಸಹ ನಿರ್ದಾಕ್ಷಿಣ್ಯವಾಗಿ ಹೇಳಿಕೊಂಡಿರುತ್ತಾನೆ.

ಈ ಮುನ್ನುಡಿ ಹಾವಳಿಯು ಬರಿ ಗ್ರಂಥರಚನೆಯ ಕ್ಷೇತ್ರಕ್ಕೆ ಮಾತ್ರವೇ ಮೀಸಲಾದುದಲ್ಲ ಇದು ಜೀವನದ ಬೇರೆ ಬೇರೆ ರಂಗಗಳಲ್ಲಿಯೂ ಬೇರೆ

ಬೇರೆ ರೂಪಗಳಲ್ಲಿಯೂ ವಿಜೃಂಭಿಸುತ್ತಿದೆ. ಉಪನ್ಯಾಸ ಕ್ಷೇತ್ರದಲ್ಲಂತೂ ಇದರ ಹಾವಳಿ ಹೇಳತೀರದು. ಒಬ್ಬ ಹೆಸರಾಂತ ಭಾಷಣಕಾರರನ್ನು ಕರೆಯಿಸುತ್ತಾರೆ. ಆತನು ಮಾಡುವ ಭಾಷಣದ ವಿಷಯ ಮುಂತಾದವು ಮುಂಚಿತವಾಗಿಯೇ ಅಚ್ಚಾಗಿ ಪ್ರಕಾಶನವಾಗಿರುತ್ತವೆ. ಅಂದಿನ ಸಭೆಗೆ ಇಂತಹವರೇ ಅಧ್ಯಕ್ಷರಾಗಬೇಕೆಂದು ನಿರ್ಧರವಾಗಿರುತ್ತದೆ. ಆದರೂ ಕಾರ್ಯದರ್ಶಿ ಮುನ್ನುಡಿಗಾರಂಭಿಸಿ ಎಲ್ಲರಿಗೂ ತಿಳಿದ ವಿಷಯಗಳನ್ನು ವಿವರಿಸುತ್ತಾನೆ. ಅಧ್ಯಕ್ಷರ ಅಸಮರ್ಥತೆ, ಅಯೋಗ್ಯತೆ (ಇವು ಸಹ ಎಲ್ಲರಿಗೂ ತಿಳಿದಿರುತ್ತವೆ !) ಗಳನ್ನು ವಿವರಿಸುತ್ತಾನೆ. ಮತ್ತೆ ಒಬ್ಬಿಬ್ಬರು, ಭಾಷಣಕಾರನು ಹೇಳಿದ ವಿಷಯಗಳನ್ನು ಮುನ್ನುಡಿಯಲ್ಲಿ ಬೇಡವೆಂದರೂ ಹೇಳಿಯೇ ಬಿಡುತ್ತಾರೆ.

*  *  *  *

ಮೊದಲಿಗೆ ನಾಟಕಗಳಲ್ಲಿ ಈ ಮುನ್ನುಡಿ ಕೆಲಸವನ್ನು ನಟ ಸೂತ್ರಧಾರರು ವಹಿಸಿಕೊಂಡಿದ್ದರು. ಆದರೆ ಈಗ ಅವರ ಪೀಡೆ ತಪ್ಪಿದೆ. ಏಕೆಂದರೆ ನಾಟಕ ಕಂಪನಿಗಳು ಮುಳುಗಿಹೋಗಿವೆ. ಅದರ ಹಿಂದೆಯೇ ನಟ ಸೂತ್ರಧಾರರು ತೇಲಿಹೋಗಿದ್ದಾರೆ. ಎಂತಲೋ ಏನೋ ನಾಟಕಕಾರರೂ ಕೂಡಾ ಮುನ್ನುಡಿ ಬರೆದು, ಬರೆಸಿ ಅಥವಾ ತಾವೇ ಬರೆದು ಬರೆಸಿದಹಾಗೆ ಮಾಡಿ, ನಟ ಸೂತ್ರಧಾರರಿಂದ ಹೇಳಿಸಬೇಕಾದ್ದನ್ನೆಲ್ಲಾ ಹೇಳಿ, ಪುಸ್ತಕ-ನೋಟಕರ ಗ್ರಹಚಾರ ಬಿಡಿಸುತ್ತಾರೆ.

*  *  *  *

ಇನ್ನು ಕವಿತೆಗೆ ಕವಿಯ ಮುನ್ನುಡಿ, ಕಥೆಗೆ ಕಥೆಯ ಮುನ್ನುಡಿ, ಕಾದಂಬರಿಗೆ ಕಾದಂಬರಿಯದೆ ಮುನ್ನುಡಿ-ಜೀವನ ಚರಿತ್ರೆಗೆ, ಸ್ವ ಅಥವಾ ಪರಜೀವನ ಚರಿತ್ರೆಯು ಮುನ್ನುಡಿ-ಹಾಗೇ ಮುನ್ನುಡಿಯ ಕುಲಕ್ಕೆ ಕೋಟಿ ಸಂತಾನ; ಆದರೆ ಬಣ್ಣಿಸಲು ವ್ಯವಧಾನವೆಲ್ಲಿ? ಆದ್ದರಿಂದ ಸಧ್ಯಕ್ಕಿಷ್ಟು ಸಾಕು.

# ಹೊಸ ಪೀಡೆ

ನನ್ನ ಹೆಂಡತಿ ಕಮಲೂಗೆ ಎಲ್ಲವೂ ಬೇಸರ. ಪುಸ್ತಕ ಓದೆಂದರೆ ಅವ ರಲ್ಲೇನಿದೆ, ಅದೇ ಹಳೆಯ ಪ್ರಣಯ ಕಥೆ ಅಂತ ಅನ್ನುತ್ತಾಳೆ. ಕವಿತೆಗಳಲ್ಲಿ ಪ್ರಾಸಕ್ಕಾಗಿ ತ್ರಾಸ ಪಡುವುದರ ವಿನಾ ಇನ್ನೇನೂ ಇಲ್ಲವಂತೆ. ಇನ್ನು ಪತ್ರಿಕೆ ಗಳಲ್ಲಿ, ಆಹಾರ, ಗೋಳೀಬಾರು, ಮುಷ್ಕರ, ನಿಯೋಗ ಅಂತ ಬಡಕೊ ಳ್ಳುತ್ತಲೇ ಇರುತ್ತಾರೆ. ಪ್ರಪಂಚದಲ್ಲಿ ಇನ್ನೇನೂ ನಡೆಯುತ್ತಾ ಇಲ್ಲವೇ ? ಅಂತ ಪ್ರಶ್ನೆ ಬಿಗಿಯುತ್ತಾಳೆ

ಇವಳ ಬೇಸರ ಕಳೆಯಲು ಒಂದು ದಿನ ವಾಲೀಬಾಲ್ ಮ್ಯಾಚಿಗೆ ಕರೆದುಕೊಂಡು ಹೋದೆ. ಹತ್ತು ನಿಮಿಷವಾಗುವ ಹೊತ್ತಿಗೆ ಖಾಗಾ ತೆಗೆ ದಳು. "ಇದೇನಾಟ, ಗಾಳಿ ಗುದ್ದಿ ಮೈ ನೋಯಿಸಿಕೊಳ್ಳುವುದು. ಒಂದು ನಿರ್ಜೀವ ವಸ್ತುವನ್ನು ಇತ್ತಿಂದತ್ತ ಅತ್ತಿಂದಿತ್ತ ಹೊಡೆಯುವುದರಲ್ಲಿ ಬುದ್ಧಿ ವಂತಿಕೆ ಏನು ಬಂತು, ಏನು ಪೌರುಷ ?" ಅಂತ ಕೇಳಿದಳು.

ಇನ್ನೊಂದು ದಿನ ಯಾರದೋ ಭಾಷಣವಿತ್ತು. ಅವರು ಹೆಸರಾಂತ ವೈಜ್ಞಾನಿಕರು. "ಆಕಳಿಕೆ" ಎಂಬ ವಿಷಯದ ಮೇಲೆ ಉಪನ್ಯಾಸ ಮಾಡು ವರೆಂದು ಪ್ರಕಟಿಸಿದ್ದರು. ಅಧ್ಯಕ್ಷರು, ಕಾರ್ಯದರ್ಶಿಗಳು ಮೊದಲಾಗಿ ಹತ್ತು ಜನರ ಪ್ರಚಂಡ ಸಭೆ ಸೇರಿತ್ತು. ಹೋಗಿ ಕೂತೆವು. ಭಾಷಣ ಕಾರರು "ಆಕಳಿಕೆ" ವಿಷಯವಾಗಿ ಬಹಳ ಸ್ವಾರಸ್ಯವಾಗಿ ಭಾಷಣ ಮಾಡಿದ್ದ

ರಿಂದ ಅದು ಮೇಲಿಂದ ಮೇಲೆ ಬರಲಾರಂಭವಾಯಿತು. ಲಕ್ಷಣವಾಗಿ ನಾಚಿಕೆಯಿಲ್ಲದೆ ಎದ್ದು ಬಂದೆವು.

ಅವಳ ಬೇಸರದ ಕಥೆಯಿಂದ ನಮ್ಮನ್ನೇಕೆ ಬೇಸರ ಪಡಿಸುತ್ತಿದ್ದಾನೆಂದು ಓದುಗರು ಪ್ರಶ್ನಿಸಬಹುದು. ಈ ಬೇಸರ ಕಳೆಯಲು ನಾನು ಪಟ್ಟ ಪಾಡು, ಅದರ ಪ್ರತಿಕ್ರಿಯೆ ಮುಂತಾದ ವಿಷಯಗಳು ಬಹಳ ಸ್ವಾರಸ್ಯವಾಗಿರುವುದ ರಿಂದ ಅವನ್ನು ಇಲ್ಲಿ ಉಲ್ಲೇಖಿಸಲು ಹೊರಟಿದ್ದೇನೆ.

ಒಂದು ಸಾರಿ ಅವಳು ಬೇಸರದ ಸಾವೇರಿ ರಾಗವನ್ನೋ, ನೀಲಾಂಬರಿ ಯನ್ನೋ ನುಡಿಸುತ್ತಿದ್ದಾಗ ಯಾವುದೋ ಪತ್ರಿಕೆ ಓದುತ್ತಿದ್ದೆ. ಶಾರದಾ ಚಕ್ರಬಂಧ ಸ್ಪರ್ಧೆ ನನ್ನ ಕಣ್ಣಿಗೆ ಬಿತ್ತು. "ನೀನೇಕೆ ಚಕ್ರಬಂಧ ಸ್ಪರ್ಧೆಗಳನ್ನು ಬಿಡಿಸಬಾರದು. ಹಣಕ್ಕೆ ಹಣವೂ ಬರುತ್ತೆ. ಸಮಯಕ್ಕೆ ಸಮಯವೂ ಹೋಗುತ್ತೆ," ಅಂತ ಹೇಳಿದೆ. ಅವಳ ಮುಖವರಳಿತು. ಆಗಲೇ ಆ ಸ್ಪರ್ಧೆ ಯನ್ನು ಬಿಡಿಸತೊಡಗಿದಳು.

ಚಕ್ರಬಂಧ ಸ್ಪರ್ಧೆ ದೈವದತ್ತವಾಗಿ ದೊರೆತಂತಾಯಿತು. ಅಂದಿ ನಿಂದ ಅವಳ ಗೋಳಾಟ ಗೊಣಗಾಟಗಳು ಕಡಿಮೆಯಾದವು. ಯಾವುದಾ ದರೂ ಶಬ್ದ ತಿಳಿಯದಿದ್ದರೆ ಅದಕ್ಕೆ ಅರ್ಥ, ಚೌಕದಲ್ಲಿ ಸರಿಯಾದ ಶಬ್ದ ಜೋಡಿಸುವುದು ಮುಂತಾದುವುಗಳಿಗೆ ನನ್ನ ಸಹಾಯವನ್ನು ಕೋರುತ್ತಿದ್ದಳು.

ನಾವು ಕಳಿಸಿದ ಮೊದಲಿನ ಚಕ್ರ ಬಂಧ ಸ್ಪರ್ಧೆಯಲ್ಲಿ ಕೇವಲ ೧೫ ತಪ್ಪುಗಳಿದ್ದವು. ಅದಕ್ಕಿಂತ ಹೆಚ್ಚು ತಪ್ಪು ಮಾಡಲು ಸಾಧ್ಯವೇ ಇರಲಿಲ್ಲ, ನಾನು ಅಸಾಧಾರಣ ಬುದ್ಧಿ ಉಪಯೋಗಿಸುತ್ತಿದ್ದೇನೆಂದೂ ಈ ಚಕ್ರ ಬಂಧ ಸ್ಪರ್ಧೆಗಳಿಗೆ ಸರ್ವೇ ಸಾಮಾನ್ಯ ಪದಗಳನ್ನು ಉಪಯೋಗಿಸಬೇಕೆಂತಲೂ ಆಕೆ ತಿಳಿಸಿದಳು. ಬಹುಮಾನ ಬರದಿದ್ದರೆ ಹಾಳಾಗಲಿ, ನನ್ನಲ್ಲಿ ಅಸಾಧಾರಣ ಬುದ್ಧಿ ಇದೆ ಅಂತ ಮನಗಂಡಳಲ್ಲಾ ಎಂಬುದೇ ನನಗೆ ಸಂತೋಷ.

ಆಮೇಲಾಮೇಲೆ ಅವಳೇ ಸ್ಪರ್ಧೆಗಳನ್ನು ಬಿಡಿಸುತ್ತಿದ್ದಳು. ಆ ಬಗ್ಗೆ ನನ್ನ ಸಲಹೆ ಕೋರುತ್ತಿರಲಿಲ್ಲ. ಅಳುವ ಮಗುವು ಯಾವುದಾದರೂ ಬೊಂಬೆ

ಯನ್ನಿಟ್ಟುಕೊಂಡು ಆಟವಾಡುವುದನ್ನು ನೋಡಿ ತಾಯಿ ಸಂತೋಷಿಸುವಂತೆ ನಾನೂ ಸಂತೋಷಿಸಿದೆ.

ಕಚೇರಿ ಕೆಲಸ ಮುಗಿಸಿಕೊಂಡು ಮನೆಗೆ ಬಂದೆ. ಆ ದಿನ ನನ್ನ ಟಪಾಲಿಗೆ ಮಿತ್ರ ರಘೂನ ವಿವಾಹ ಮಹೋತ್ಸವಾಹ್ವಾನ ಪತ್ರಿಕೆ ಬಂದಿತ್ತು. ಅದನ್ನು ತೋರಿಸುತ್ತ "ರಘೂನ ವಿವಾಹ ಮಹೋತ್ಸವ ಕಣೇ" ಅಂದೆ ಅವಳು "ತಾಳೀಂದ್ರೆ, ೩೯ನೇ ಸ್ಪರ್ಧೆಯ ೭ರ ಬಲದಿಂದ ಎಡಕ್ಕೆ ಇದರಿಂದ ಅಪಾಯ ಸಂಭವಿಸುತ್ತದೆ ಅಂತ ಇದೆ. ಇದು ವಿವಾಹವೋ ಅಥವಾ ವಿವಾದವೋ ಹೇಳಿ" ಅಂತ ಕೇಳಿದಳು. ಸ್ವಾನುಭವದ ಆಧಾರದ ಮೇಲೆ ನಾನು ವಿವಾಹ ಅಂತ ಹೇಳಿದೆ.

ಅವಳಿಗೆ ಸಿಟ್ಟು ಬಂದು ಮೂರು ದಿನ ಮಾತು ಬಿಟ್ಟಳು. ರಾಜಿಯಾಗ ಬೇಕೆಂದು ನಾನೇ ನಾಲ್ಕನೆಯ ದಿನ ಹೇಳಿದೆ. "ನೀನು ಹೇಳಿದ ವಿವಾದವೇ ಸರಿ. ವಿವಾದದಿಂದ ತಾನೇ ನಾವು ಮಾತು ಅನರ್ಥ ಮಾಡಿಕೊಂಡದ್ದು" ಅಂದೆ. ಅವಳ ಮುಖಮಂಡಲದಿಂದ ನಗೆದಿಂಗಳು ಸೂಸಿತು. "ನಿನ್ನ ನಗೆಗೆ ಯಾವ ಹೋಲಿಕೆಯೂ ಸಿಗದು." ಎಂದೆ. "ತಾಳೀಂದ್ರೆ, ೨೯ ನೆಯ ಸ್ಪರ್ಧೆಯಲ್ಲಿ ಇದು ಹೆಚ್ಚಾದರೆ ಕಷ್ಟ ಸಂಭವಿಸುತ್ತೆ ಅಂತಿದೆ. ನಗೆಯೋ, ಹಗೆಯೋ?"

ವಿಪತ್ತಿನಿಂದ ಪಾರಾಗಲು ಏನೋ ಉಪಾಯ ಹುಡುಕಿದರೆ ಅದು ಇನ್ನೂ ಆಪತ್ತಿಗಿಟ್ಟುಕೊಂಡಿತು. ಅವಳು ಒಲೆಯ ಮುಂದೆ ಕೂತಾಗಲೂ ಚಕ್ರಬಂಧ ಸ್ಪರ್ಧೆ ಬಿಡಿಸುತ್ತಿರುತ್ತಾಳೆ. ಎಷ್ಟೋ ಸಾರಿ ನಾನು ರಾತ್ರಿ ಊಟ ಮಾಡಿ ಮಲಗಿದರೂ ಅವಳು ಮೇಜಿನ ಮುಂದೆ ಕುಳಿತು ನಿಘಂಟಿನ ಹಾಳೆಗಳನ್ನು ತಿರುವಿ ಹಾಕುತ್ತಿರುತ್ತಾಳೆ.

ಒಂದು ದಿನ ಸಿನಿಮಾಕ್ಕೆ ಹೋದೆವು. ಯಾವುದೋ ಬಹು ಒಳ್ಳೆಯ ಚಿತ್ರ. ಕಿವಿಯಲ್ಲಿ "ನೋಡು, ಈ ಚಿತ್ರದಲ್ಲಿ ಅಭಿನಯಿಸಿರುವ ತಾರೆ ಖ್ಯಾತಿವೆತ್ತವಳು," ಅಂತ ಹೇಳಿದ್ದೇ ತಡ, "ತಾಳೀಂದ್ರೆ, ೪೦ ನೆಯ ಸ್ಪರ್ಧೆಯ ೯ರ ಮೇಲಿಂದ ಕೆಳಕ್ಕೆ ಇವರ ಬೆಡಗು ಇತ್ತೀಚೆಗೆ ಬಹಳ ಹೆಚ್ಚಿದೆ.

ಇದು ತಾರೆ ಅಥವಾ ನೀರೆ ಇರಬೇಕು. ಯಾವುದು ಸರಿ?" ಎಂದಳು ನಾನೇನು ಉತ್ತರ ಕೊಡುತ್ತಿದ್ದೆನೋ ಹೇಳಲಾರೆ. ಅಷ್ಟರಲ್ಲೇ ಯಾರೋ ಹಿಂದೆ ಕುಳಿತಿದ್ದ ಪುಣ್ಯಾತ್ಮರು "ರೀ, ಸುಮ್ನಿರ್ರೀ, ನಿಮ್ಮ ಟಾಕೀ ಕೇಳೋಕೆ ನಾವು ಬಂದಿಲ್ಲ. ಚಿತ್ರದ ಟಾಕೀ ಕೇಳ್ಳಿಕ್ಕೆ ಬಂದಿದ್ದೇವೆ" ಅಂತ ಅರಚಿದರು.

ಯಾವಾಗಲೂ ಹೇಳುವಂತೆ ಆ ತಿಂಗಳು ನನಗೆ ಸಂಬಳ ಬಂದ ದಿನವೇ ಒಂದು ಸೀರೆಯನ್ನು ಅತ್ಯಗತ್ಯವಾಗಿ ತರಬೇಕೆಂದು ಹೇಳಿದಳು. "ನಿನ್ನ ಪೆಟ್ಟಿಗೆಯಲ್ಲಿ ಐದಾರಿವೆ. ಹಗ್ಗದ ಮೇಲೆ ಎರಡಿವೆ. ಉಟ್ಟಿರೋದೊಂದು" ಎಂತ ನಮ್ಮ ಮನೆಯ ಬಟ್ಟೆ ಬರೆಯ ಪಟ್ಟಿಯನ್ನೆಲ್ಲಾ ಅವಳಿಗೆ ಗೊತ್ತಿದ್ದರೂ ತಿಳಿಸಿದೆ. "ಅದೆಲ್ಲಾ ನನಗೆ ಗೊತ್ತಿಲ್ಲದೆ ಇಲ್ಲ. ವಾಯಿಲ್‌ನಲ್ಲಿ ಚಿಕ್ಕ ಹೂಗಳಿರುವ ಮುದ್ದಾದ ಸೀರೆ "ಪುಣ್ಯಾತ್ಮ ಸಮಾಜ ಸ್ಟೋರ್ಸಿಗೆ" ಬಂದಿದೆ. ಅದು ನನಗೆ ಬೇಕೇ ಬೇಕು" ಅಂತ ಹಟ ಹಿಡಿದಳು. ನಾನು ಏನು ಹೇಳಿದರೂ ಒಪ್ಪಲಿಲ್ಲ. ಅಡಚಣೆ ಅಭಾವದ 'ಅ' ಕಾರದಿಂದ ಕ್ಷಮಿಸು ಅನ್ನುವ 'ಕ್ಷ' ಕಾರಂತದವರೆಗೂ ಹೇಳಿದೆ. "ಬಿಡೀಂದ್ರೆ, ಹೇಗೂ ೫,೦೦೦ ರೂಪಾಯಿನ ಮೊದಲ ಬಹುಮಾನ ಬರುತ್ತೆ. ಆ ಹಣದಲ್ಲಿ ಬೇಕಾದರೆ ನೀವೇ ಒಂದು ಸರ್ಜ್ ಸೂಟ್ ಹೊಲಿಸಿಕೊಳ್ಳಿ" ಅಂತ ಹೇಳಿದಳು. ಸರ್ಜ್ ಸೂಟ್ ಸಿಗುವುದೆಂಬ ಆಸೆಗೆ ಬಲಿ ಬಿದ್ದು ಸೀರೆಗೆ ಹಣ ಕೊಟ್ಟೆ.

ಆದರೆ ಆ ಸಾರಿ ಉತ್ತರ ಬಂದಾಗ ಇವಳಿಗೆ ೫,೦೦೦ ರೂಪಾಯಿ ಬರುವುದಿರಲಿ, ಸಮಾಧಾನದ ಒಂದು ರೂಪಾಯಿ ಕೂಡ ಬಂದಿರಲಿಲ್ಲ. ಆದರೂ ಸಹ ಅವಳು ಚಕ್ರಬಂಧ ಸ್ಪರ್ಧೆಗಳನ್ನು ಬಿಡಿಸುವುದು ನಿಲ್ಲಿಸಲಿಲ್ಲ. ಮನೆಗೆ ಬರುತ್ತಿದ್ದ ಇವಳ ಗೆಳತಿಯರು ಬರುವುದನ್ನು ಬಿಟ್ಟರು. ಅವರು ಬಿಡಬಹುದು, ಆದರೆ ನಾನು ನನ್ನ ಮನೆಗೆ ಹೋಗದಿರಲು ಹೇಗೆ ಸಾಧ್ಯ?

ಅಂದು ಆಫೀಸಿನಲ್ಲಿ ಒಂದು ಕಾಗದ ಹುಡುಕಲು ಸರಿಹೊತ್ತು ರಾತ್ರಿಯ ವರೆಗೂ ಕುಳಿತುಕೊಳ್ಳಬೇಕಾಯಿತು. ಸಾಮಾನ್ಯವಾಗಿ ಅಷ್ಟು ಹೊತ್ತಿನಲ್ಲಿ ಬಾಗಿಲು ತೆಗೆಸಬೇಕಾದಾಗ ನನಗೆ ಕುರಿ, ಕೋಣ ಬೀಳುತ್ತಿತ್ತು. ಹತ್ತಾರು ಬಾರಿ ಕೂಗಿದ ಮೇಲೆ ಆಗತಾನೇ ಎಚ್ಚತ್ತು ಕಣ್ಣುಜ್ಜಿಕೊಳ್ಳುತ್ತ, ಶಪಿಸುತ್ತ

ಬಾಗಿಲು ತೆಗೆಯುತ್ತಿದ್ದಳು. ಆದರೆ ಈ ದಿನ ಒಂದೇ ಕೂಗಿಗೇ 'ಓ' ಕೊಟ್ಟಳು. ಚಕ್ರಬಂಧ ಸ್ಪರ್ಧೆ ಬಿಡಿಸುತ್ತ ಕೂತಿದ್ದಳೆಂದು ನಾನೇನೂ ಹೇಳ ಬೇಕಾಗಿಲ್ಲವಷ್ಟೆ.

ಯಾರೋ ಸ್ನೇಹಿತರು ಹೋಟಲಿಗೆ ಕರೆದುಕೊಂಡು ಹೋಗಿದ್ದರು. ಬೇಡ ಬೇಡ ಅನ್ನುತ್ತಾ ಪುಟ್ಟಂ ಪೂರಾ ತಿಂದ್ಬು ಬಿಟ್ಟಿದ್ದೆ. ಊಟ ಮಾಡುವ ಹಾಗಿರಲಿಲ್ಲ. ಮಲಗಲು ನಿರ್ಧರಿಸಿದೆ.

ಆದರೆ ಕಮಲು ಹಾಸಿಗೆಯನ್ನೇ ಹಾಸಿರಲಿಲ್ಲ. "ಏಕೆ ಹಾಸಿಗೆ ಹಾಸಿಲ್ಲ?" ಅಂತ ಧೈರ್ಯ ಮಾಡಿ ಕೇಳಿದೆ. ತಟ್ಟನೆ ಅವಳು "ತಾಳೀಂದ್ರೆ, ಳಗನೆಯ ಸ್ಪರ್ಧೆಯಲ್ಲಿ ಲರ ಮೇಲಿಂದ ಕೆಳಕ್ಕೆ....ಹಾಸಿಗೆ ಹೇಸಿಗೆ" ಅಂತ ಇನ್ನೂ ಏನೇನೋ ಹೇಳುತ್ತಿದ್ದಳು.

ನನಗೆ ಎಲ್ಲೂ ಇಲ್ಲದ ಸಿಟ್ಟು ಬಂದಿತು. "ನಿನ್ನ ಸ್ಪರ್ಧೆ ಹೇಸಿಗೆ, ನನಗೀಗ ಬೇಕಾಗಿರುವುದು ಹಾಸಿಗೆ" ಅನ್ನುತ್ತ ಮೂಲೆಯಲ್ಲಿದ್ದ ಹಾಸಿಗೆ ಉರುಳಿಸಿ ರಗ್ಗಿನ ಪೊದರಿನಲ್ಲಿ ಎಲ್ಲಿಯೋ ನುಸುಳಿ ಅಡಗಿದೆ.

# ಪತ್ರಿಕೋದ್ಯಮಿ

ಪತ್ರಿಕೋದ್ಯಮಿಯ ಬಗ್ಗೆ ನಾನು ಹಾಸ್ಯ ಬರಹ ಬರೆಯಲು ಆರಂಭಿಸಿದಾಗ ನನಗೇ ನಗು ಬಂತು. ಇವನ ಬಗ್ಗೆ ಹಾಸ್ಯವೇನು ಸಿಕ್ಕೀತು ಅಂತ. ಆದರೂ ಸ್ವಲ್ಪ ವಿಚಾರ ಮಾಡಿದಾಗ ಈ ಪತ್ರಿಕೋದ್ಯಮಿ ಎಂಬ ಪ್ರಾಣಿಯ ಜೀವನವೇ ಅತಿ ಹಾಸ್ಯಾಸ್ಪದವಾದದ್ದು ಎಂತ ಕಂಡು ಬಂದಿತು. ಇವನಿಗೆ ಎಲ್ಲ ವಿಷಯಗಳೂ ತಿಳಿದಿರುತ್ತವೆ. ಆದರೆ ಯಾವುದೂ ಸರಿಯಾಗಿ ತಿಳಿದಿರುವುದಿಲ್ಲ. ಇವನು ಕಾಗದದಲ್ಲಿ ಕೋಟ್ಯಂತರ ರೂಪಾಯಿಗಳನ್ನು ಕಾಣುತ್ತಾನೆ. ಯೋಜನೆಗಳನ್ನು ಸಿದ್ಧಪಡಿಸುತ್ತಾನೆ. ಆದರೆ ಸುದಾಮನ ತಮ್ಮ ಇವನು. ಇವನ ಬಡತನದ ಬಗ್ಗೆ ಸ್ವಾರಸ್ಯವಾದ ಪ್ರಸಂಗಗಳಿವೆ. ಕೇಳಿ :

ಒಂದು ಸಾರಿ ಒಬ್ಬ ಪತ್ರಿಕೋದ್ಯಮಿಯು ಪೋಲೀಸಿನವರಿಗೆ ದೂರು ಕೊಟ್ಟ, ಒಂದು ನೂರು ರೂಪಾಯಿ ಕಳುವಾಗಿದೆಯೆಂದು. ಪೋಲೀಸಿನವರು ದೂರು ಕೊಟ್ಟ ಪತ್ರಿಕೋದ್ಯಮಿಯನ್ನು ಬಂಧಿಸಿದರು, ಅಷ್ಟೊಂದು ಹಣ ಎಲ್ಲಿತ್ತೆಂದು.

ಒಂದು ಸಾರಿ ಪತ್ರಿಕೋದ್ಯಮಿಯೊಬ್ಬನ ಮನೆಗೆ ಒಬ್ಬ ಕಳ್ಳ ರಾತ್ರಿ ನುಗ್ಗಿದ. ಅಂದು ಆ ಪತ್ರಿಕೋದ್ಯಮಿ ಊರಿನಲ್ಲಿರಲಿಲ್ಲ. ಮನೆಯಲ್ಲಿ ಸದ್ದಾದುದನ್ನು ಕೇಳಿ ಅವನ ಹೆಂಡತಿ ದೀಪ ಹೊತ್ತಿಸಿದಳು. ಆಕೆ ಕಳ್ಳನನ್ನು ಮನಸ್ವಿ ಬಯ್ದಳು. "ಥೂ, ನಿನಗೆ ಬುದ್ಧಿಯಿಲ್ಲ. ಈ ಮನೆಯಲ್ಲಿ ಹಗಲು ಹೊತ್ತಿನಲ್ಲಿಯೇ ನನಗೆ ಮೂರು ಕಾಸು ಸಹ ಸಿಕ್ಕಿಲ್ಲ, ಅಂಥಾದ್ದು ನೀನು ರಾತ್ರಿ ಹೊತ್ತು ಇಲ್ಲಿ ತಡಕಾಡುತ್ತಿದ್ದೀಯಲ್ಲ?" ಅಂತ ಅವನನ್ನು ಮೂದಲಿಸಿದಳು.

ಚರ್ಚ್‌ನಲ್ಲಿ ಪ್ರಾರ್ಥನೆ ಮುಗಿಯಿತು. ಪಾದ್ರಿ ದುಡ್ಡಿಗಾಗಿ ತಟ್ಟೆ ಕಳಿ

ಸಿದ. ಎಲ್ಲರೂ ಶಕ್ತ್ಯನುಸಾರ ದುಡ್ಡು ಹಾಕಿದರು. ಪತ್ರಿಕೋದ್ಯಮಿಯ ಮುಂದೆಯೂ ತಟ್ಟೆ ಬಂದಿತು. ಆತ ಕೂಡಲೇ "ಪ್ರೆಸ್" ಅಂದವನೇ ಎದ್ದು ಹೋದ. ಇವನ್ನು ನೀವು ಸಮಯ ಸ್ಫೂರ್ತಿ ಎಂದು ಹೇಳಬಹುದು. ಆದರೂ ನಾನು ಮಾತ್ರ ಬಡತನ ಅಂತ ಹೇಳುತ್ತೇನೆ.

ಹಾಗೆಂದ ಮಾತ್ರಕ್ಕೆ ಇವನಲ್ಲಿ ಸಮಯ ಸ್ಫೂರ್ತಿಯಿಲ್ಲವೆಂದಲ್ಲ. ಅದೇ ಅವನ ಜೀವಾಳ, ಬಂಡವಾಳ. ಸುಪ್ರಸಿದ್ಧ ಪತ್ರಿಕೋದ್ಯಮಿಯಾದ ನಾರ್ಥ್ ಕ್ಲಿಫ್‌ರವರ ಸಮಯ ಸ್ಫೂರ್ತಿಯ ವಿಷಯ ಕೇಳಿ. ಪತ್ರಿಕೆಯಲ್ಲಿ ಸ್ಥಳ ಖಾಲಿ ಯಿತು. ಸುದ್ದಿಯನ್ನು ಜೋಡಿಸಿ ಹಾಕಲು ವೇಳೆಯಿರಲಿಲ್ಲ. ಒಂದು ಮರದ ತುಂಡನ್ನು ಆ ಖಾಲಿ ಇದ್ದ ಸ್ಥಳದಲ್ಲಿ ಹಾಕಿ ಅದರ ಕೆಳಗೆ "ಇದೊಂದು ಜಗತ್ಪ್ರಸಿದ್ಧ ವ್ಯಕ್ತಿಯ ಚಿತ್ರ. ಈತನ ಹೆಸರನ್ನು ಸರಿಯಾಗಿ ತಿಳಿಸಿದವರಿಗೆ ಐದು ಪೌಂಡ್ ಬಹುಮಾನ" ಅಂತ ಬರೆದದ್ದಾಯಿತು. ಸರಿ. ದೇಶದ ನಾನಾ ಮೂಲೆಗಳಿಂದ ಚಿತ್ರದ ಹೆಸರನ್ನು ಸೂಚಿಸಿದ ಕಾಗದಗಳು ಬಂದವು. ಅವುಗಳಲ್ಲಿ ಲೆನಿನ್, ಸ್ಟಾಲಿನ್, ಡಿಸ್ರೇಲಿ, ಷೇಕ್ಸ್‌ಪಿಯರ್, ಗಾಂಧೀಜಿ ಇತ್ಯಾದಿ ಎಲ್ಲ ಜಗತ್ಪ್ರಸಿದ್ಧ ವ್ಯಕ್ತಿಗಳ ಹೆಸರೂ ಸೂಚಿಸಲ್ಪಟ್ಟಿದ್ದವು.

ನ್ಯೂಯಾರ್ಕ್ ಬ್ಯಾಂಕ್ ಒಂದರಲ್ಲಿ ಯಾವುದೋ ಅವ್ಯವಹಾರ ನಡೆದಿತ್ತು. ಅದನ್ನು ಪರೀಕ್ಷಿಸಲು ಕೆಲ ಜನ ಸರ್ಕಾರಿ ಪರೀಕ್ಷಕರು ಬಂದಿದ್ದರು. ಅವರಿಗೆ ತಕ್ಕ ಸಮಜಾಯಿಷಿ ಕೊಡಲು ಬ್ಯಾಂಕಿನ ವಕೀಲರೂ ಬಂದಿದ್ದರು. ಸಭೆ ಆರಂಭವಾಯಿತು. ಸರಿ. ಆಗುಂತಕನೊಬ್ಬ ಬಂದು "ಕೆಲಸ ಆರಂಭಿಸೋಣ" ಎನ್ನುತ್ತ ತನ್ನ ಬೆತ್ತ ಮತ್ತು ಹ್ಯಾಟನ್ನು ಖಾಲಿಯಿದ್ದ ಕುರ್ಚಿಯೊಂದರ ಮೇಲಿಟ್ಟ. ಪರೀಕ್ಷಕರು ಈತ ಬ್ಯಾಂಕಿನ ವಕೀಲರಲ್ಲಿ ಒಬ್ಬ ಎಂದು ತಿಳಿದುಕೊಂಡರು. ವಕೀಲರು ಈತನೊಬ್ಬ ಪರೀಕ್ಷಕ ಎಂತ ತಿಳಿದುಕೊಂಡರು. ಬಂದಿದ್ದವನೊಬ್ಬ ಪತ್ರಿಕಾ ಪ್ರತಿನಿಧಿ. ಆ ಸಭೆಯಲ್ಲಿ ತಾನು ತಿಳಿದುಕೊಂಡಿದ್ದ ಸುದ್ದಿಯನ್ನು ಅಂದಿನ ದಿನವೇ ತನ್ನ ಪತ್ರಿಕೆಯಲ್ಲಿ ಪ್ರಕಟಿಸಬೇಕಾಗಿತ್ತು. ಕೂಡಲೇ ಬೆತ್ತ ಮತ್ತು ಹ್ಯಾಟ್ ತೆಗೆದುಕೊಂಡು ಎದ್ದ. ಪರೀಕ್ಷಕರು ಕೇಳಿದರು, "ನೀವು ಯಾರ ಪ್ರತಿನಿಧಿ?" ಎಂದು. ವಕೀಲರು

ಕೇಳಿದರು, "ನೀವು ಯಾರ ಪ್ರತಿನಿಧಿ?" ಎಂದು. ಆತ ಒಂದು ಗಳಿಗೆ ಸುಮ್ಮನಿದ್ದು ನಾನು 'ಹರ್ಸ್ಟ್' ಮತ್ತು 'ಚಿಕಾಗೋ ನ್ಯೂಸ್' ಪತ್ರಿಕೆಗಳ ಪ್ರತಿನಿಧಿ ಎಂದು ಹೇಳುತ್ತ ಹೊರಟೇ ಹೋದ. ಪರೀಕ್ಷಕರು ಮತ್ತು ವಕೀಲರು ಮಿಕಿ ಮಿಕಿ ಕಣ್ಣು ಬಿಡುತ್ತ ಹಾಗೆಯೇ ಕುಳಿತುಕೊಂಡರು.

ಪತ್ರಿಕೋದ್ಯಮಿಯನ್ನು ಜನ ಗೌರವಿಸುವುದು ನಿಜ. ಅದು ಅವನಿಗೆ ಸಲ್ಲತಕ್ಕ ಮರ್ಯಾದೆಯಿಂದಲ್ಲ ಹೆದರಿಕೆಯಿಂದ ನಾಗರಹಾವನ್ನು ಪೂಜಿಸಿದ ರೀತಿಯಲ್ಲಿ ಎಲ್ಲಿ ಏನು ಮಾಡಿಬಿಡುತ್ತಾನೋ ಎಂಬ ಭಯದಿಂದ.

ಒಬ್ಬ ಪತ್ರಿಕೋದ್ಯಮಿ ಸತ್ತು ಹೋದ ಯಮದೂತರು ಬಂದು ಅವನನ್ನು ಯಮಸದನಕ್ಕೆ ಎಳೆದೊಯ್ದರು. ಇವನನ್ನು ನೋಡಿ ಯಮ "ಈ ತರಲೆ ಮನುಷ್ಯನನ್ನು ಇಲ್ಲೇಕೆ ಕರೆತಂದಿರಿ? ಇಲ್ಲಿ ಇವನು ಗಲಾಟೆ ಎಬ್ಬಿಸಿ ನನ್ನ ಸ್ಥಾನಕ್ಕೆ ಸಂಚಕಾರ ತರುತ್ತಾನೆ. ಇವನನ್ನು ಸ್ವರ್ಗಕ್ಕೆ ಕಳಿಸಿ ಬಿಡಿ" ಅಂತ ಹೇಳಿದ. ಆದರೆ ಸ್ವರ್ಗದಲ್ಲಿಯೂ ಇವನಿಗೆ ಸ್ಥಳ ಸಿಗಲಿಲ್ಲ. ಕೊನೆಗೆ ಈ ಪತ್ರಿಕೋದ್ಯಮಿ ಖಾಲಿ ಬಿದ್ದಿದ್ದ ಒಂದು ಗ್ರಹಕ್ಕೆ ಹೋಗಿ ಅಲ್ಲಿಂದಲೇ ಒಂದು ಪತ್ರಿಕೆ ಹೊರಡಿಸಿದ ಯಮ ಇವನನ್ನು ಅತಿಥಿಯಾಗಿ ಸ್ವಾಗತಿಸಿದ. ಇವನ್ನು ನೋಡಿ ಸ್ವರ್ಗಾಧಿಪತಿಯೂ ಆಹ್ವಾನ ಕೊಟ್ಟ. ಮೊದಲು ಬೇಡವೆಂದವರು ತಾವೇ ಮರ್ಯಾದೆಯಿಂದ ಸ್ವಾಗತಿಸಿದರು.

ಪತ್ರಿಕೋದ್ಯಮಿಗೆ ಪುರಸೊತ್ತೆಂಬುದಿಲ್ಲ. ರಜದಲ್ಲಿ ದಿನಕ್ಕಿಂತಲೂ ಆತನಿಗೆ ಕೆಲಸ ಹೆಚ್ಚು. ಅವನ ಕೆಲಸವೇ ಅವನಿಗೆ ಮನರಂಜನೆ. ಬಿಡುವಿನಲ್ಲಿ ಸಹ ಆತ ಹೇಗೆ ಕೆಲಸ ಮಾಡುತ್ತಾನೆಂಬುದನ್ನು ನೋಡಿ.

ಒಂದು ಶನಿವಾರ ಸಂಜೆ ಕೆಲ ಪತ್ರಿಕೋದ್ಯಮಿಗಳು ಅಂದು ತಮ್ಮ ತಮ್ಮ ಕೆಲಸ ಮುಗಿಸಿಕೊಂಡು ಹೋಟಲೊಂದರಲ್ಲಿ ಒಂದು "ಪಾರ್ಟಿ" ಏರ್ಪಡಿಸಿದ್ದರು. ಯಾವುದೋ ಒಂದು ಬೀಧಿಯಲ್ಲಿ ಮೂರಂತಸ್ತಿನ ಮನೆಗೆ ಬೆಂಕಿ ಬಿದ್ದಿತೆಂದು ಸುದ್ದಿ ಬಂತು. ಆ ಗಂಭೀರ ವಿಷಯ ಅಂದಿನ ಪತ್ರಿಕೆಯ ಕೊನೆಯುಚ್ಚಿನಲ್ಲಿಯಾದರೂ ಬರಲೇ ಬೇಕು. ಪಾರ್ಟಿಯಿಂದ ಕದಲಲು ಯಾರಿಗೂ ಇಷ್ಟವಿಲ್ಲ. ಅಲ್ಲಿಯೇ ಇದ್ದ ಟೆಲಿಫೋನ್ ಅನ್ನು ಚೂಟಿ ಪತ್ರಿ

ಕೋದ್ಯಮಿ ತೆಗೆದುಕೊಂಡು ಪೋಲೀಸ್ ಸ್ಟೇಷನ್ನಿಗೆ ಪೋಲೀಸ್ ಸೂಪರಿಂಟೆಂಡೆಂಟ್ ಮಾತನಾಡುವ ಹಾಗೆ ಮಾತನಾಡಿ ಬೆಂಕಿ ಬಿದ್ದ ಸ್ಥಳಕ್ಕೆ ಹೋಗಬೇಕೆಂದು ಕಾನ್‌ಸ್ಟೇಬಲ್‌ಗಳಿಗೆ ತಿಳಿಸಿದ. ಬೆಂಕಿ ಆರಿಸುವ ಪಡೆಯವರಿಗೂ ತಿಳಿಸಿದ. ಮತ್ತು ಸ್ವಲ್ಪ ಹೊತ್ತಾದ ಮೇಲೆ ಬೆಂಕಿ ಬಿದ್ದ ಕಟ್ಟಡದ ಸಮೀಪದಲ್ಲಿಯೇ ಇದ್ದ ಇನ್ನೊಂದು ಕಟ್ಟಡಕ್ಕೆ ಫೋನ್ ಮಾಡಿ ಬೆಂಕಿ ಆರಿಸುವ ಪಡೆಯವರಿಗೆ ಸೂಚನೆ ಕೊಡುತ್ತ ಅವರಿಂದ ವಿವರಗಳನ್ನು ತಿಳಿದುಕೊಂಡ. ಪೋಲೀಸ್ ಕಾನ್‌ಸ್ಟೇಬಲ್‌ಗಳೂ ಸಹ ಸೂಪರಿಂಟೆಂಡೆಂಟ್ ಮಾತನಾಡುತ್ತಿದ್ದಾರೆಂದು ಅವನಿಗೆ ವಿವರಗಳನ್ನು ಒದಗಿಸಿದರು. ಎಲ್ಲವನ್ನೂ ಬರೆದುಕೊಂಡು ಆ ಕೂಡಲೇ ಆ ವಿವರಗಳನ್ನು ತನ್ನ ಪತ್ರಿಕೆಗೆ ಫೋನ್ ಮೂಲಕ ತಿಳಿಸಿದ. ಅಂದಿನ ಪತ್ರಿಕೆಯಲ್ಲಿ ಈತನ ವಿವರಗಳೇ ಬಹಳ ಸ್ವಾರಸ್ಯವಾಗಿದ್ದವು.

ಮೇಲೆ ಹೇಳಿದಂತೆ ಮಾಡಲು ಹೋಗಿ ಕಲ್ಕತ್ತೆಯ ಪತ್ರಿಕೋದ್ಯೋಗಿಯೊಬ್ಬ ಠೋಕರ್ ತಿಂದ. ಅಂದು ಸಂಜೆ ಸಭೆಯೊಂದಿತ್ತು. ಭಾಷಣಕಾರರು ಅಧ್ಯಕ್ಷರು, ವಿಷಯ ಮುಂತಾದ ವಿವರಗಳು ಮೊದಲೇ ಪ್ರಕಟವಾಗಿದ್ದವು. ಈ ಪತ್ರಿಕೋದ್ಯೋಗಿ ಸಂಜೆ ಕ್ಲಬ್ಬಿಗೆ ಹೋಗಿ ಇಸ್ಪೀಟ್ ಬಡಿಯುತ್ತ ಕುಳಿತುಕೊಂಡ. ಅಲ್ಲಿಂದಲೇ ಅಂದಿನ ಸಭೆಯ ಕಾರ್ಯಕಲಾಪಗಳನ್ನು ವರದಿಮಾಡಿದ. ಭಾಷಣಕಾರ ಏನು ಮಾತನಾಡುತ್ತಾನೆ, ಅಧ್ಯಕ್ಷ ಹೇಗೆ ಸಮಾರೋಪಗೊಳಿಸುತ್ತಾನೆ, ಸಭೆಗೆ ಯಾರು ಯಾರು ಬಂದಿರುತ್ತಾರೆ, ಇವೆಲ್ಲವನ್ನೂ ಊಹೆಯ ಮೇಲೆ ಬರೆದಿದ್ದ. ಅನುಭವದಿಂದ ಇವೆಲ್ಲ ಅವನಿಗೆ ತಿಳಿದಿತ್ತು. ಆದರೆ ಅಘಟಿತ ಘಟನೆಯೊಂದು ನಡೆಯಿತು. ಅಂದಿನ ಭಾಷಣಕಾರರು ದೇಹಾಲಸ್ಯ ನಿಮಿತ್ತ ಸಭೆಗೆ ಬಂದಿರಲಿಲ್ಲ. ಸಭೆಯನ್ನು ಮುಂದುವರಿಸಲಾಗಿತ್ತು. ಉಳಿದ ಆಭಾಸ ಪ್ರಕರಣದ ವಿವರಣೆ ಅನಗತ್ಯ.

ಪತ್ರಿಕಾವೃತ್ತಿ ಸಾಮಾನ್ಯವಾಗಿ ಎಲ್ಲರನ್ನೂ ಆಕರ್ಷಿಸುತ್ತೆ. ಈ ವೃತ್ತಿ ಕಠಿಣತರವಾದದ್ದೆಂದು ತಿಳಿದುಬರುವುದು ಅದನ್ನು ಪ್ರವೇಶಿಸಿದ ಮೇಲೆಯೇ. ಹೊಣೆಗಾರಿಕೆ ಹೆಚ್ಚಾದರೂ ಹೊಟ್ಟೆ ತುಂಬುವದಿಲ್ಲ–ತಲೆ ಮಾತ್ರ ತುಂಬುತ್ತೆ.

ಮಾರ್ಕ್‌ಟ್ವೇನನಂತಹ ಜಗತ್ಪ್ರಸಿದ್ಧ ಹಾಸ್ಯಗಾರನಿಗೂ ಪತ್ರಿಕಾವೃತ್ತಿಯನ್ನು ಅವಲಂಬಿಸಬೇಕೆನಿಸಿತು. ಒಂದು ಪತ್ರಿಕಾಕಚೇರಿಯಲ್ಲಿ ಉಪಸಂಪಾದಕನಾಗಿ ಸೇರಿಕೊಂಡ. ಆರು ತಿಂಗಳು ಕಳೆಯಿತು. ಸೇರಿದ ದಿನ ಅವನು ಯಾವ ಮಟ್ಟದಲ್ಲಿದ್ದನೊ ಆರು ತಿಂಗಳು ಕಳೆದರೂ ಅದೇ ಮಟ್ಟದಲ್ಲಿದ್ದ. ಸಂಪಾದಕ ಮಹಾಶಯ ಟ್ವೇನ್‌ಗೆ ಅಪ್ಪಣೆ ಚೀಟಿ ಕೊಟ್ಟ. ಟ್ವೇನ್ ಗುಡುಗಿದ, "ನಿನ್ನಂತಹ ಅಪ್ರಯೋಜಕ ಈ ಪ್ರಪಂಚದಲ್ಲಿಯೇ ಇಲ್ಲ" ಎಂದು. ಸಂಪಾದಕನ ಕೋಪ ತಾರಕಕ್ಕೇರಿತು "ನೀನೇನು ಹೇಳುತ್ತಿದ್ದೀಯೇ?" ಅಂತ ಕೇಳಿದ. "ನಾನು ಈ ಕಚೇರಿಗೆ ಬಂದು ಕಾಲಿಟ್ಟ ದಿನವೇ ನಾನು ಯಶಸ್ವಿಯಾಗಲಾರೆನೆಂದು ತಿಳಿದೆ. ಅದನ್ನು ತಿಳಿಯಲು ನೀನು ಆರು ತಿಂಗಳ ಕಾಲ ತೆಗೆದುಕೊಂಡೆ ನಿನ್ನಂಥ ಮೂರ್ಖನೇ ಇಲ್ಲ" ಎಂದು ಹೇಳುತ್ತ ಟ್ವೇನ್ ಕಂಬಿ ಕಿತ್ತ.

ಕನ್ನಡ ಪತ್ರಿಕಾಪ್ರಪಂಚ ವಿಚಿತ್ರವಾಗಿದೆ. ವೃತ್ತಿಯ ಮೆರಗಿನ ಮೋಹ ಜಾಲಕ್ಕೆ ಸಿಕ್ಕಿರುವವರು ಕೆಲವರು; ಹೊಟ್ಟೆ ಹೊರೆಯಲು ಯಾವುದಾದರೂ ಒಂದು ವೃತ್ತಿಯನ್ನು ಕೈಕೊಳ್ಳಬೇಕು ಇದನ್ನೇಕೆ ಕೈಕೊಳ್ಳಬಾರದು ಎಂದು ಕೆಲವರು; ಆಕಸ್ಮಿಕವಾಗಿ ಈ ವೃತ್ತಿಗೆ ಸೇರಿಕೊಂಡಿರುವವರು ಕೆಲವರು; ಹೀಗಾಗಿ ಈ ವೃತ್ತಿ ಒಂದು ಕಲಸುಮೇಲೋಗರದ ಕೂಟವಾಗಿದೆ. ಎಂಥ ಖೋಟಾ ನಾಣ್ಯವನ್ನೂ ಸಹ ಈ ವೃತ್ತಪತ್ರಿಕಾಪ್ರಪಂಚದಲ್ಲಿ ಚಲಾಯಿಸಬಹುದೆಂಬ ನಂಬಿಕೆ ಅನೇಕರಿಗಿದೆ.

ಒಬ್ಬನಿಗೆ ತಲೆ ಗಾಯವಾಯಿತು. ಶಸ್ತ್ರಚಿಕಿತ್ಸೆ ಅನಿವಾರ್ಯವಾಯಿತು. ವೈದ್ಯರು ಶಸ್ತ್ರ ಚಿಕಿತ್ಸೆಮಾಡಿ ಹೊಲಿಗೆ ಹಾಕಿದರು. ಆದರೆ ಅವಸರದಲ್ಲಿ ರೋಗಿಯ ಮಿದುಳನ್ನು ತಲೆಯೊಳಕ್ಕೆ ಸೇರಿಸಿರಲಿಲ್ಲ. ತಲೆ ಹೊಲಿದಾದ ಮೇಲೆ ಈ ಅಂಶದ ಅರಿವಾಯಿತು. ಅವರು ರೋಗಿಗೆ ಹೇಳಿದರು. "ಕ್ಷಮಿಸಿ ನಾನು ನಿಮ್ಮ ಮಿದುಳನ್ನು ಮರೆತು ಹಾಗೆಯೇ ಬಿಟ್ಟೆ. ಹೊಲಿಗೆ ಬಿಚ್ಚಿ ಶಸ್ತ್ರ ಚಿಕಿತ್ಸೆಮಾಡಿ ಮಿದುಳನ್ನು ತಲೆಯೊಳಕ್ಕೆ ಸೇರಿಸುತ್ತೇನೆ." ರೋಗಿ ಹೇಳಿದ, "ಸ್ವಾಮಿ, ನಾನು ಪತ್ರಿಕಾಕಚೇರಿಯಲ್ಲಿ ಕೆಲಸಕ್ಕೆ ಸೇರುತ್ತೇನಾದ್ದರಿಂದ ನನಗೆ ಅದರ ಅಗತ್ಯವಿಲ್ಲ" ಅಂತ.

ಆದರೂ ಪತ್ರಿಕೋದ್ಯಮಿಯ ತಲೆ ಒಂದು ಹೋಲ್ಡ್ ಆಲ್ ಇದ್ದ ಹಾಗೆ. ಆದರಲ್ಲಿ ಹಲ್ಲುಪುಡಿ, ಎಡ್ಗಾರ್ ವಾಲೇಸ್ ಕಾದಂಬರಿ, ಎರಡು ಕಾರ್ಡು, ಮೂರು ಸ್ಟಾಂಪು, ಎರಡು ಬಿಸ್ಕತ್ ಪೊಟ್ಟಣ ಇದ್ದ ಹಾಗೆ. ಮಹಿಳೆಯರ ಉನ್ನತಿ, ಮ್ಯಾಂಚೆಸ್ಟರ್ ಬಟ್ಟೆ ವ್ಯಾಪಾರಿ, ಕಾನ್ಸ್ಟಿಟ್ಯುಯೆಂಟ್ ಅಸೆಂಬ್ಲಿ, ವೈದ್ಯಕೀಯ, ಯುದ್ಧವಿನ್ಯಾಸ, ಎಲ್ಲದರಲ್ಲೂ ಆತನಿಗೆ ಪರಿಶ್ರಮ ಇದೆ. ಅಭಿನವ ಸರ್ವಜ್ಞನೆಂದರೆ ಆತನ ಕಡೆ ಬೆರಳು ಮಾಡಿ ತೋರಿಸಬಹುದು. ಆದರೆ ಎಲ್ಲವೂ ಚೌ ಚೌ. ಎಲ್ಲವೂ ಸ್ವಲ್ಪ ಇದೆ. ಹೆಚ್ಚಿಲ್ಲ.

# ಮಾವನ ಕಾಗದ--ಅಳಿಯನ ಉತ್ತರ

ಚಿ|| ರಾಮರಾಯನಿಗೆ, ಹನುಮಂತರಾಯನು ಮಾಡುವ ಆಶೀರ್ವಾದಗಳು. ಆದಾಗಿ ಉಭಯ ಕುಶಲೋಪರಿ ಸಾಂಪ್ರತ ತರುವಾಯ—

ನಿನ್ನ ಆರೋಗ್ಯದ ಬಗ್ಗೆ ನೀನು ಬರೆದ ಕಾಗದ ತಲ್ಪಿತು. ಈ ಬಾರಿಯ ದೀಪಾವಳಿಗೆ ನಿನ್ನನ್ನು ಆಹ್ವಾನಿಸಲು ಈ ಕಾಗದ ಬರೆಯು ತ್ತಿದ್ದೇನೆ. ಈ ಕಾಗದ ಬರೆಯಲು ಎರಡು ದಿನ ತಡವಾದದ್ದಕ್ಕೆ ಏನೂ ತಿಳಿದುಕೊಳ್ಳಬೇಡ. ಈಗ ಸರ್ಕಾರದವರು ಅಕ್ಕಿಯ ರೇಷನ್ ಕಮ್ಮಿ ಮಾಡಿದುದರಿಂದ ನಮಗೆ ಅಕ್ಕಿ ಸಾಲುತ್ತಿಲ್ಲ. ವಾರಕ್ಕೆ ಎರಡು ದಿನ ಹುಯ್ದುಕೊಳ್ಳಬೇಕಾಗುತ್ತೆ–ದೋಸೇನ. ಇನ್ನೆರಡು ದಿನ ಮರದ ಹೊಟ್ಟೆ ನಂತಿರುವ ಗೋಧೀಹಿಟ್ಟನಿಂದ ರೊಟ್ಟಿ ಮಾಡುತ್ತಾರೆ. ಇದನ್ನು ತಿಂದು ಕಮಲೂಗೇ ಆಮಶಂಕೆಯಾಗಿತ್ತು. ಇದಕ್ಕೇ ಕಾಗದ ಬರೀಲಿಲ್ಲ.

ನಾವು ಈಗ ಮೊದಲಿನ ಮನೆಯಲ್ಲಿಲ್ಲ. ನಿರಾಶ್ರಿತರು ಹೆಚ್ಚಿಗೆ ಬಾಡಿಗೆ ಕೊಟ್ಟದ್ದರಿಂದ ಮನೆ ಮಾಲೀಕರು ನಮ್ಮನ್ನು ಬಿಡಿಸಿ ಆ ಮನೆಯನ್ನು ಅವರಿಗೆ ಕೊಟ್ಟರು. ನಾವು ಈಗ ಬಂದಿರುವ ಮನೆ ಬಹಳ ಚಿಕ್ಕದಾಗಿದ್ದರೂ ಹೆಚ್ಚು ಬಾಡಿಗೆ ಕೊಡುತ್ತಿದ್ದೇವೆ. ಇದನ್ನೆಲ್ಲಾ ಕಾಗದ ದಲ್ಲಿ ಏತಕ್ಕೆ ಬರೆಯಬೇಕಾಯಿತೆಂದರೆ ಈ ಕಿಷ್ಕಿಂಧೆಯಲ್ಲಿ ನಿನ್ನ ಮತ್ತು ರತ್ನಾನ ಕೂಡಿಸಿ ಆರತಿ ಎತ್ತುವುದು ಹೇಗೆ ಎಂತ ಯೋಚನೆಯಾಗಿದೆ. ಅಲ್ಲದೆ ಆರತಿಗೆ ನಾಲ್ಕು ಜನಾನ್ನ ಕರೆದರೆ ಅವರನ್ನ ರಸ್ತೆಯಲ್ಲಿ ಕೂರಿಸಲು ಸಾಧ್ಯವೆ ?

ದೀಪಾವಳಿ ಹಬ್ಬಕ್ಕೆ ನೀನೇನೋ ಬರುತ್ತೀಯ ಅನ್ನು, ಆದರೆ ಹಬ್ಬದಲ್ಲಿ ಯಾವ ಭಕ್ಷ್ಯ ಭೋಜ್ಯಗಳನ್ನು ಮಾಡಿಸಬೇಕೆಂಬ ಬಗ್ಗೆ ನನಗೂ ನಿಮ್ಮತ್ತೆಗೂ ಸಣ್ಣ ಯುದ್ಧವೇ ಆಯಿತು. ರವೆಯನ್ನು ಕಣ್ಣಿಂದ ನೋಡದೆ ಅದೆಷ್ಟೋ ತಿಂಗಳುಗಳಾದವು. ರವೆ ಇಲ್ಲದ ಮೇಲೆ ಯಾವ ಪದಾರ್ಥದಿಂದ ಭಕ್ಷ್ಯ ತಯಾರಿಸೋದು ? ಜಿಲೇಬಿ ಮಾಡೋಣವೆಂದರೆ ಮೈದಾಹಿಟ್ಟು ಸಿಕ್ಕುತ್ತಿಲ್ಲ. ಲಾಡು ಮಾಡಲು ಹುಳುಗೊಂಡೆಗಳಿರುವ ಕಡಲೆಹಿಟ್ಟು ಮಾತ್ರ ದೊರೆಯುತ್ತದೆ.

ಹಬ್ಬಕ್ಕೆ ಬರುವ ನಿನಗೆ ಏನಾದರೂ ಉಡುಗೊರೆ ತರೋಣವೆಂದು ಮೊನ್ನೆ ಪೇಟೆಗೆ ಹೋಗಿದ್ದೆ. ಉಂಗುರಕ್ಕೆ ಬಂಗಾರ ೧೧೬ ರೂಪಾಯಿ ತೊಲವಂತೆ. ಗಡಿಯಾರ ಚೆನ್ನಾಗಿರುವುದು ಒಂದು ಶತಮಾನಕ್ಕೆ ಕಡಿಮೆ ಯಿಲ್ಲ. ಈ ಬೆಲೆಗಳನ್ನು ಕೇಳಿದ್ದರಿಂದಲೋ ಅಥವಾ ಇನ್ನಾವುದೋ ಕಾರಣದಿಂದಲೋ ಚಳಿ ಬಂದುಬಿಟ್ಟಿತು. ಇನ್ನೂ ಇವೊತ್ತು ಹಾಸಿಗೆ ಯಿಂದ ಎದ್ದಿದ್ದೇನೆ.

ದೀಪಾವಳಿಗೆ ನೀನು ಬರುತ್ತಿ ಎಂಬುದು ಗೊತ್ತು. ಯಾವಾಗ ಬರುತ್ತೀಯೆಂಬುದಕ್ಕೆ ಕೂಡಲೇ ಕಾಗದ ಬರೆ. ಮನೆಯಲ್ಲಿ ಸೌಭಾಗ್ಯವತಿ ಮತ್ತು ಚಿರಂಜೀವಿಗಳಾದಿಯಾಗಿ ಎಲ್ಲರೂ ಆರೋಗ್ಯವಾಗಿದ್ದಾರೆ.

—ಇತಿ ಆಶೀರ್ವಾದಗಳು.

## ಅಳಿಯನ ಉತ್ತರ

ತೀರ್ಥರೂಪು ಸಮಾನರಾದ ಮಾವನವರಿಗೆ, ಬಾಲಕ ಶ್ಯಾಮನ ನಮಸ್ಕಾರಗಳು. ಅದಾಗಿ, **ಉಭಯ** ಕುಶಲೋಪರಿ ತರುವಾಯ,

ತಮ್ಮ ದೀಪಾವಳಿ ಕರೆ ಓಲೆಯು ಬಂದು ತಲ್ಪಿತು. ನಿಮ್ಮ ಕಾಗದ ನೋಡಿದಮೇಲೆ ಹಬ್ಬಕ್ಕೆ ಬರಬೇಕೇ ಬೇಡವೆ, ಎಂಬ ಬಗ್ಗೆ ಬಹಳವಾಗಿ ಆಲೋಚಿಸಿದೆ. ನಾನು ಬರದೆ ಇದ್ದರೆ ನೀವುಗಳೆಲ್ಲ ವಿಪರೀತ ಅಸಮಾಧಾನ ಪಟ್ಟುಕೊಳ್ಳುವಿರೆಂಬುದು ನನಗೆ ಗೊತ್ತು. ಪಕ್ಕದ ಮನೆಗಳಲ್ಲೆಲ್ಲ ಅಳಿ

ಯೆಂದಿರು ಬಂದಿರುವಾಗ್ಗೆ, ನಿಮ್ಮ ಮನೆಗೆ ನಾನು ಬರದೆ ಹೋದಲ್ಲಿ ನಮ್ಮತ್ತೆ ಮತ್ತು ರತ್ನ ಇವರ ಮನಸ್ಥಿತಿ ಹೇಗಾಗಬಹುದೆಂದು ಊಹಿಸಿದೆ. ಅತ್ತು ಅತ್ತು ಕಣ್ಣು ಕೆಂಪಾದ, ಕೆದರಿದ ತಲೆಯ ಅವರ ಚಿತ್ರಗಳು ನನ್ನ ಕಣ್ಣು ಮುಂದೇ ಸುಳಿದು–ಹೋಗಲಿ ಬಿಡಿ–ಇಂಥ ದೀಪಾವಳಿ ಹಬ್ಬದ ಸಮಯದಲ್ಲಿ ಇಂಥದ್ದನ್ನೆಲ್ಲಾ ನಿಮ್ಮ ನೆನಪಿಗೆ ತರಬಾರದು.

ಹೋಟಲಲ್ಲಿ ಊಟಮಾಡಿಕೊಂಡಿರುವ ನನಗೆ ಅನ್ನ ಇಲ್ಲದ ಊಟ, ಯಂತ್ರಗಳಿಂದ ತಯಾರಾದಂಥ ಹುಳಿ, ಸಾರು, ಪಲ್ಯ, ಚಟ್ನಿ ಇತ್ಯಾದಿ ಗಳನ್ನು ತಿಂದು ಎಂಥ ಅಡಿಗೆಯನ್ನಾದರೂ ಊಟ ಮಾಡುವ ಅಭ್ಯಾಸ ತನಗೆ ತಾನೇ ಬಂದುಬಿಟ್ಟಿದೆ. ಮನೆ ಅಂದ ಮೇಲೆ ಅನುಕೂಲಗಳೂ ಅನಾನುಕೂಲಗಳೂ ಇರುತ್ತವೆ. ಒಂದುವೇಳೆ ಹೋಟಲಿನ ಅನಾನುಕೂಲ ನನಗೆ ದೊರೆಯುವುದಾದರೆ, ಅದಕ್ಕೆ ಹೊಂದಿಕೊಂಡಿರುವ ನನಗೆ ಅಷ್ಟೇನೂ ತೊಂದರೆಯಾಗಲಾರದು.

ಇನ್ನು ಭಕ್ಷ್ಯ ಭೋಜ್ಯಗಳ ಬಗ್ಗೆ ನೀವು ಬರೆದಿದ್ದೀರಿ. ಇದೇನು ಅಂಥ ಕಷ್ಟ ಸಮಸ್ಯೆಯಲ್ಲ. ರವೆ, ಮೈದಾಹಿಟ್ಟು, ಒಳ್ಳೆಯ ಕಡಲೆಹಿಟ್ಟು ಯಾರಿಗೆ ಸಿಕ್ಕದಿದ್ದರೂ, ಹೋಟಲಿನವರಿಗೆ ಅದು ಹೇಗೋ ಸಿಕ್ಕುತ್ತವೆ. ನೀವು ಯಾವುದಾದರೂ ಹೋಟಲವರನ್ನು ಹಿಡಿದುಬಿಡಿ, ಯಕ್ಷಿಣಿಯಂತೆ ನಿಮ್ಮ ಕೆಲಸವಾಗುತ್ತೆ. ಇದಕ್ಕಿಂತಲೂ ಇನ್ನೊಂದು ಸುಲಭೋಪಾಯ ವಿದೆ. ಹೋಟಲಿನವರೇ ಹೇಗೂ ಲಾಡು, ಚಿರೋಟಿ ಮುಂತಾದವನ್ನು ಮಾಡಿರುತ್ತಾರೆ. ಅವನ್ನೇ ತಂದರಾಯಿತು. ಇದರಿಂದ ಅತ್ತೆಯವರ ಶ್ರಮವೂ ಕಡಿಮೆ ಆಗುತ್ತೆ.

ಇನ್ನು ಮನೆ ಕಿಷ್ಕಿಂಧೆಯಾಗಿದೆ ಎಂದು ಬರೆದಿದ್ದೀರಿ. ಈಗ ನಮ್ಮ ಒಂದಂಕಣದ ರೂಮಿನಲ್ಲಿ ಐದು ಜನ ಇದ್ದೇವೆ. ದಿನವೂ ನಾನು ಮೇಜಿನ ಕೆಳಗೆ ಮಲಗುತ್ತಿದ್ದೇನೆ. ಬರಬರುತ್ತಾ ಇದೇ ಹಿತವಾಗತೊಡಗಿದೆ. ನಿಮ್ಮ ಮನೆಯಲ್ಲಿ ಆರತಿ ಅಕ್ಷತೆ ಆದಂತೆ ಇತರರ ಮನೆಗಳಲ್ಲೂ ಆಗು ತ್ತಿರುತ್ತವೆ. ಇದರಿಂದ ನಿಮ್ಮ ಮನೆಗೇ ಹೆಚ್ಚು ಜನರು ಬಂದು ನುಗ್ಗುವ

ದಿಲ್ಲ. ಅಲ್ಲದೆ ಇದು "ಕ್ಯೂ" ಯುಗ. ಎಲ್ಲದಕ್ಕೂ ಕ್ಯೂ ನಿಲ್ಲುತ್ತೇವೆ. ಆರತಿ ಅಕ್ಷತೆಗೆ ಏಕೆ ಕ್ಯೂ ನಿಲ್ಲಬಾರದು ?

ದೀಪಾವಳಿ ಉಡುಗೊರೆಯ ಬಗ್ಗೆ ನೀವು ಬಹಳ ಸಂಕೋಚಪಟ್ಟು ಕೊಂಡಿದ್ದೀರಿ. ಇದು ನಿಜವಾಗಿಯೂ ನನಗೆ ಅರ್ಥವಾಗಿಲ್ಲ. ಪೇಟೆಯಿಂದ ಅಂಥಿಂಥ ಹಾಳು ಮೂಳು ಸಾಮಾನುಗಳಿಗೆ ಹಣ ಹಾಕದೆ, ಅದೇ ಹಣವನ್ನು ನನಗೆ ಆರತಿ ಸಮಯದಲ್ಲಿ ಕೊಟ್ಟರೆ ಆಗದೆ ?

ನಿಮ್ಮ ಆಹ್ವಾನದ ಮೇರೆಗೆ ನಾನು ಖಂಡಿತ ಹೊರಟುಬರುತ್ತೇನೆ. ಪಾಡ್ಯದ ಬೆಳಿಗ್ಗೆ ನಿಮ್ಮೂರಿನಲ್ಲಿರುತ್ತೇನೆ. ನನ್ನ ಆರೋಗ್ಯ ಯಥಾಸ್ಥಿತಿ. ನೀವುಗಳೆಲ್ಲ ಆರೋಗ್ಯವಾಗಿರುವುದನ್ನು ಕೇಳಿ ಸಂತೋಷವಾಯಿತು.

—ಇತಿ ನಮಸ್ಕಾರಗಳು,

ವಿ. ಸೂ.—ಹಬ್ಬಕ್ಕೆ ಹುಡುಗರಿಗೆ ಪಟಾಕಿ ತರಬೇಕೆಂದು ಮಾಡಿದ್ದೆ. ಮೈಸೂರು ಕಾಂಗ್ರೆಸ್ ಅಧ್ಯಕ್ಷರ ಪ್ರಕಟಣೆಗೆ ಮನ್ನಣೆ ಕೊಡಬೇಕೆಂದು ಸುಮ್ಮನಾದೆ.

# ಆಯುಷ್ಕರ್ಮ ಕಾಂಡ

ನನ್ನ ವೈರಿಗಳಲ್ಲೆಲ್ಲಾ ನಾನು ಕ್ಷೌರಿಕನಿಗೆ ಹೆದರುವಷ್ಟು ಇನ್ನಾರಿಗೂ ಹೆದರುವುದಿಲ್ಲ. ಅವನಿಗಿಂತ ತಿರಸ್ಕರಣೀಯವಾದ ವಸ್ತು ನನಗೆ ಬೇರೊಂದಿಲ್ಲ. ನಾಗರೀಕ ಜನರೊಂದಿಗೆ ನನ್ನ ಸಂಪರ್ಕ ಬೆಳೆದ ಮೇಲೆ ನಾನು ಕ್ಷೌರಿಕನಿಂದ ತುಚ್ಛವಾಗಿ ಕಾಣಲ್ಪಟ್ಟಷ್ಟು ಇನ್ನಾವ ವ್ಯಕ್ತಿಯಿಂದಲೂ ಅಲ್ಲ. ಸೆಲೂನು ಗಳು ಹೆಚ್ಚಿದಂತೆ ನನ್ನಲ್ಲಿದ್ದ ಸ್ವೆಚ್ಛ ಮನೋವೃತ್ತಿಯ ಅಣು ಈಗ ಪರ್ವ ತಾಕಾರವಾಗಿ ಬೆಳೆದಿದೆ.

ನನ್ನ ಅನುಭವದ ಕತೆಯನ್ನು ಮೊದಲಿನಿಂದಲೇ ಆರಂಭಿಸುತ್ತೇನೆ. ನಾನಿನ್ನೂ ಚಿಕ್ಕವನು. ಆ ದುರಂತ ಪ್ರಕರಣದ ಕೆಲವು ಕಹಿ ನೆನಪುಗಳು ನನ್ನ ಸ್ಮೃತಿಪಟಲದ ಮೇಲೆ ಈಗಲೂ ಅಚ್ಚಳಿಯದೆ ಉಳಿದಿವೆ. ಚೌಲ ಕ್ಕಾಗಿ ಮನೆ ಮಂದಿಯೆಲ್ಲ ಸೇರಿ ನನ್ನನ್ನು ಸಿದ್ಧಪಡಿಸಿದರು. ಆ ಸಮಯ ದಲ್ಲಿ ಯಾವನೋ ಹೊಸದಾಗಿ ಓಲಗ ಅಭ್ಯಸಿಸುತ್ತಿದ್ದ. ಏನೂ ಆಗುವುದಿಲ್ಲ ವೆಂದೂ, ಎಲ್ಲಾ ಐದು ನಿಮಿಷಗಳಲ್ಲಿ ಮುಗಿದುಹೋಗುವದೆಂದೂ ನನ್ನ ತಾಯಿ ಹೇಳಿದಳು. ತೆಪ್ಪಗೆ ಕೂಡದಿದ್ದರೆ ಎರಡು ಕೊಡುವುದಾಗಿ ನನ್ನ ತಂದೆ ಗದ್ದರಿಸಿದರು. ಅರ್ಧಗಂಟೆ ಸೋಮಾರಿಯಾಗಿ ತಲೆ ತಗ್ಗಿಸುವುದು ಹೇಗೆಂಬುದೇ ನನಗೆ ಸಮಸ್ಯೆಯಾಗಿತ್ತು. ಗತ್ಯಂತರವಿಲ್ಲದೆ ಕೂತುಕೊಂಡೆ. ನನ್ನ ಸ್ನೇಹಿತನೊಬ್ಬ ನನಗೆ ಧೈರ್ಯ ಕೊಟ್ಟ. ಆಪತ್ಕಾಲಕ್ಕೆ ಸ್ನೇಹಿತರು ಒದಗದಿದ್ದರೆ ಇನ್ನಾರು ಒದಗಿಯಾರು ? ಕೊನೆಗೆ ಕ್ಷೌರಿಕನ ಹಿಡಿತಕ್ಕೆ ಸಿಕ್ಕೆ. ನನ್ನ ಮೊಂಡತನಕ್ಕೆ ಶಿಕ್ಷೆ ವಿಧಿಸಬೇಕೆಂತಲೋ ಅಥವಾ ಹೊಸದೊಂದು ವಧಾಪಶು ದೊರಕಿತೆಂತಲೋ ಏನೋ ಅವನು ತುಂಬಾ ಸಂತೋಷದಲ್ಲಿಯೇ

ಇದ್ದ. ಆದರೆ ಆ ಮುದಿ ಕ್ಷೌರಿಕನ ಕೈ ನಡಗುತ್ತಿತ್ತು. ಅದರಂತೆಯೇ ನನ್ನ ತಲೆಯೂ ಸಹ. ಕತ್ತರೀ ಪ್ರಯೋಗಕ್ಕೆ ಆರಂಭಿಸಿದ. ಕತ್ತರಿಯು ನನ್ನ ತಲೆಯ ಮೇಲೆಲ್ಲಾ ಸರಾಗವಾಗಿ, ಓಡಿಯಾಡತೊಡಗಿತು. ಕ್ಷೌರಿಕ ನಿಷ್ಕರುಣೆಯಿಂದ ನನ್ನ ಕೂದಲನ್ನೆಲ್ಲಾ ಕತ್ತರಿಸಿದ. ಅದರಂತೆಯೇ ನನ್ನ ಎಡ ಕಿವಿಯನ್ನೂ.

ಇದೇನೂ ಅಲ್ಪ ವಿಷಯವಲ್ಲ. ತೀವ್ರವಾಗಿ ಪ್ರತಿಭಟಿಸಲೇಬೇಕು· ದೊಡ್ಡ ದನಿಯಿಂದಲೇ ಪ್ರತಿಭಟಿಸಿದೆ ನನ್ನ ಕೂಗಾಟ, ಚೀರಾಟ ಮನೆಯವರನ್ನೆಲ್ಲಾ ನನ್ನ ಬಳಿ ಬರುವಂತೆ ಮಾಡಿತು. ಕ್ಷೌರಿಕ ನಾಚಿಕೆಯಿಂದ ತಲೆ ತಗ್ಗಿಸಿದ. ನನ್ನ ತಲೆ ಸರಿಯಾಗಿಲ್ಲದ್ದರಿಂದಲೇ ಹೀಗಾಯಿತೆಂದ. ಆದರೂ ಅವನ ದಾಕ್ಷಿಣ್ಯ ನೋಡಿ. ತಾನು ಮಾಡಿದ ಮುಟ್ಠಾಳ ಕೆಲಸಕ್ಕೂ ದುಡ್ಡು ತೆಗೆದುಕೊಂಡ.

ಕಲಿತ ಆ ಎರಡು ಪಾಠಗಳಿಂದ ನಾನಾಗಿಯೇ ಎಂದೂ ಕ್ಷೌರಿಕನ ಬಳಿ ಹೋಗುತ್ತಿರಲಿಲ್ಲ. ನನ್ನ ಗೆಳೆಯರ ಕಟು ವಿಮರ್ಶಾತ್ಮಕ ಟೀಕೆ ಟೂಕೆಗಳು ಹೆಚ್ಚಾದ ಮೇಲೆಯೇ ಅವನಲ್ಲಿಗೆ ಹೋಗುವುದು. "ಇದೇನು ದೀಕ್ಷೆ" "ನಾಡಿಗೇರ್ ನಾಟ್ಯಾಚಾರ್ಯನಾಗುವ ಹಾಗೆ ಕಾಣುತ್ತಲ್ಲ" "ಕ್ಷೌರಕ್ಕೆ ನಿನ್ನಲ್ಲಿ ದುಡ್ಡಿಲ್ಲದಿದ್ದರೆ ನಾನು ಕೊಡುತ್ತೇನೆ" "ಈ ವರ್ಷ ಕ್ಷಾಮ ಎಲ್ಲಿಂದ ಬಂತು, ನಾಡಿಗೇರನ ತಲೆಯಲ್ಲಿ ಪುಷ್ಕಳ ಬೆಳೆಯಿದೆ." ಇವೇ ಟೀಕೆಗಳಲ್ಲಿ ಆರಿಸಿದ ಕೆಲವು.

ಹೈಸ್ಕೂಲಿಗೆ ಸೇರಿದ ಮೇಲೆಯೇ ನಾನು ಸಲೂನಿಗೆ ಪ್ರವೇಶಿಸಿದ್ದು. ನನ್ನ ಮಿತ್ರರೆಲ್ಲಾ ಪಟ್ಟಣಿಗರು. ಅವರು ಮಾಡದೆ ಇದ್ದುದು ಯಾವುದೂ ಇಲ್ಲ ಎಂಬ ಕಲ್ಪನೆ ಬೇರೆ ಅವರಿಗಿತ್ತು. ಅವರೆಲ್ಲರೂ ಸಲೂನ್‌ಗಳಿಗೆ ಹೋಗುತ್ತಿದ್ದರು. ನನಗೆ ನಾನೇ ಯಾರ ಬೆಂಬಲವೂ ಇಲ್ಲದೆ ಸಲೂನಿಗೆ ಹೋಗಬೇಕೆನಿಸಿತು.

ನಾನು ಹೋಗಬೇಕಾಗಿದ್ದ ಸಲೂನನ್ನು ಬಹಳ ಜಾಗರೂಕತೆಯಿಂದ ಆರಿಸಿದೆ. ಫ್ಯಾನ್ಸಿ ಹೇರ್ ಕಟಿಂಗ್ ಸಲೂನ್, ಇಲೆಕ್ಟ್ರಿಕ್ ಹೇರ್

ಕಟಿಂಗ್ ಸಲೂನ್, ಲಕ್ಷ್ಮೀ ಸಲೂನ್, ಸ್ವರಾಜ್ಯ ಹೇರ್ ಕಟಿಂಗ್ ಸಲೂನ್, ಇನ್ನೂ ಏನೇನೋ ಇದ್ದವು. ಇವುಗಳಲ್ಲಿ ಯಾವುದನ್ನು ನೋಡಿದರೂ ನನಗೆ ನಾಲ್ಕರ ಚಳಿ ಬರುತ್ತಿತ್ತು. ಕೊನೆಗೆ ಸೇಫ್ಟಿ ಹೇರ್ ಕಟಿಂಗ್ ಸಲೂನ್ ಆರಿಸಿದೆ—ಯಾವ ಅಪಾಯವೂ ತಗಲಲಾರದೆಂದು. ಸಲೂನ್‌ಗಳ ಹೆಸರುಗಳನ್ನು ನೋಡಿ ಅವನ್ನು ಆರಿಸಲು ಬರುವುದಿಲ್ಲ. ಕಲಾಸಿಪಾಳ್ಯದ ದಾರಿಯಲ್ಲಿರುವ ಒಂದು ಸಲೂನಿನ ಮೇಲೆ ನನ್ನ ಕಣ್ಣು ಬಿತ್ತು. ಸಲೂನು ಹೇಗಿರಬೇಕೋ ಅದು ಹಾಗೇ ಇದ್ದಿತು. ಕುರ್ಚಿಗಳೆಲ್ಲಾ ಹೊಸವು, ಥಳಥಳಿಸುವ ನಿಲವುಗನ್ನಡಿಗಳು, ಯಾವುದೂ ಒಡೆದಿರಲಿಲ್ಲ. ಅಲ್ಲಿದ್ದ ಜನರೂ ಬಹಳ ಚೂಟಿಯಾಗಿದ್ದರು. ಅದನ್ನೇ ಆರಿಸಿದೆ. ಏನೋ ತಲೆ ಹೋಗುವ ಒಂದು ಮಹತ್ವದ ಕೆಲಸ ಇದೆಯೆಂದೂ ಹೇಳಿ ನನ್ನ ಸ್ನೇಹಿತರಿಂದ ಕೊಸರಿಕೊಂಡು ಒಂದು ಮಧ್ಯಾಹ್ನ ಸಲೂನಿಗೆ ಬಂದೆ. ಅದೇ ನನ್ನ ಮೊದಲನೆಯ ಅನುಭವ. ಕಾರಣ, ಕೊಂಚ ಗಾಬರಿಯಾಗಿಯೇ ಇದ್ದೆ. ನಾನು ಗಾಬರಿಯಾಗಿದ್ದೇನೆಂಬ ಅಂಶ ಇತರರಿಗೆ ತಿಳಿಯದಿರಲೆಂದು ಸ್ವಲ್ಪ ದಿಟ್ಟತನದಿಂದಲೇ ಆ ಸ್ಪ್ರಿಂಗ್ ಬಾಗಿಲನ್ನು ತೆಗೆದು ಒಳಗೆ ಹೋದೆ. ವಿಹಂಗಮ ದೃಷ್ಟಿ ಬೀರಿದೆ. ಎಲ್ಲ ಕುರ್ಚಿಗಳೂ ಭರ್ತಿಯಾಗಿದ್ದವು. ಬಾಗಿಲಾಚೆ ಮೂರು ಕುರ್ಚಿಗಳು ಖಾಲಿಯಿದ್ದವು. ಒಳಗಿದ್ದವರು ಗಿಲಗಿಲನೆ ನಗುತ್ತಿದ್ದರೂ ಇದೇನು ಮಹಾ ಅನ್ನುವಂತೆ ಒಂದು ಕುರ್ಚಿಯ ಮೇಲೆ ಕುಳಿತೆ. ತಕ್ಷಣವೇ ನನ್ನ ತಪ್ಪಿನ ಅರಿವಾಯಿತು. ಜನಗಳು ನಕ್ಕ ಕಾರಣ ತಿಳಿಯಿತು. ಹಜಾಮ ಕೂಡುವ ಕುರ್ಚಿಯ ಮೇಲೆ ಕುಳಿತಿದ್ದೆ. ಕೆಲಸ ಮುಗಿದ ಮೇಲೆ ಗಿರಾಕಿಯೊಬ್ಬ ಎದ್ದ. ಅಲ್ಲಿ ಹೋಗಿ ಕುಳಿತೆ. ನನ್ನ ನಿರಪರಾಧಿ ತಲೆಯನ್ನು ಕ್ಷೌರಿಕನಿಗೆ ಬಾಗಿದೆ. ಇಂತಹ ಸಂದರ್ಭ ಇನ್ನೊಮ್ಮೆ ಸಿಕ್ಕಲಿಕ್ಕಿಲ್ಲವೆಂದು ಅವನು ಅದನ್ನು ಮನಸ್ವಿ ಉಪಯೋಗಿಸಿದ. ಕಣ್ಣುಗಳನ್ನು ಮುಚ್ಚಿದೆ. ಕಂಠ ಕೌಪೀನದ ಗಂಟುಗಳನ್ನು ಬಿಚ್ಚಿದಾಗ ನನ್ನ ಮನಸ್ಸಿಗೆ ಏನೋ ಒಂದು ತರಹೆ ಸಂತೋಷ. ತಲೆಯ ಮೇಲಿನ ಹೊರೆ ಕಳಚಿದಂತಹ ಅನುಭವ. ದುರಂತ ಒಂದರಿಂದ ಪಾರಾದೆನೆಂಬ ಕೃತ

ಜ್ಞತೆ. ಆದರೆ ಕರ್ಮಕಾಂಡ ಇನ್ನೂ ಪೂರ್ಣವಾಗಿ ಮುಗಿದಿರಲಿಲ್ಲ. ಕ್ಷೌರಿಕ ಗಂಭೀರವಾಗಿ ಕೆಳಗೆ ಪುಟ್ಟ ಟವೆಲ್ ಒಂದನ್ನು ಹಾಕಿದ. ನಾನು ತೆಪ್ಪಗೆ ಕುಳಿತು ಕೊಳ್ಳಬೇಕೆಂದು ಸಂಜ್ಞೆ ಮಾಡಿದ. ಏನೋ ಆನಂದದಾಯಕ ಪ್ರಸಂಗ ಒದಗಬಹುದೆಂದು ನಾನು ಕಣ್ಣು ಮುಚ್ಚಿದೆ. ಇನ್ನೇನೂ ಮಾಡುವುದುಳಿದಿರಲಿಲ್ಲ. ತಲೆಗಿಷ್ಟು ಸುಗಂಧದ ಎಣ್ಣೆ ಹಾಕಿ ಬಾಚುವುದು, ಕೆನ್ನೆಗಿಷ್ಟು ಸ್ನೋ, ಅಷ್ಟೇ ಅಂತ ತಿಳಿದಿದ್ದೆ. ಗಾಬರಿಯಾಗಿ ಕಣ್ದೆರೆದೆ. ನನ್ನ ಮುಖದ ಮೇಲೆಲ್ಲಾ ತಣ್ಣೀರಿಂದ ಪಿಚಕಾರಿ ಹೊಡೆಯುತ್ತಿದ್ದ. ಕಣ್ದೆರೆದಿದ್ದರಿಂದ ನೀರು ಅಲ್ಲಿಯೂ ಬಿದ್ದಿತು. ಆವನು ಮುಗಿಯಿತೆಂದು ಹೇಳುವಷ್ಟರಲ್ಲಿಯೇ ನಾನು ರಸ್ತೆಯಲ್ಲಿದ್ದೆ.

ಇನ್ನೊಂದು ಸಾರಿ ಸಲೂನಿಗೆ ಹೋಗಲು ಸಾಹಸ ಮಾಡಿದ್ದು ಈ ಘಟನೆ ಕಳೆದ ಆರುತಿಂಗಳಮೇಲೆ. ಈ ಸಾರಿಯೂ ಹೊಚ್ಚ ಹೊಸದಾದ ಮಿರುಮಿರುಗುವ ಸಲೂನನ್ನೇ ಆರಿಸಿದೆ. ಅಲ್ಲಿ ನಾಲ್ಕೇ ಕುರ್ಚಿಗಳು ಇದ್ದವು. ಎಷ್ಟು ಕಡಿಮೆಯಿರುತ್ತೋ ಅಷ್ಟೇ ಅನುಕೂಲ. ಸಲೂನ್‌ನಲ್ಲಿಯೂ ಹೆಚ್ಚು ಜನವಿರಲಿಲ್ಲ. ಸುಖಾಸನವಲ್ಲಿ ಕುಳಿತೆ. ಹದಿನೈದು ನಿಮಿಷಗಳವರೆಗೆ ಎಲ್ಲವೂ ಸರಿಹೋಯಿತು. ನನ್ನ ಕ್ಷೌರಿಕ ನನ್ನ ಬಳಿ ಇಲ್ಲವೆಂಬ ಅಂಶ ತಿಳಿಯಲು ನನಗೇನು ಬಹಳ ಹೊತ್ತು ಹಿಡಿಯಲಿಲ್ಲ. ಸುತ್ತಲೂ ನೋಡಿದೆ. ಅಲ್ಲಿದ್ದವರು ನನಗೆ ಸ್ಫೂರ್ತಿ ಕೊಡಲು ಮುಗುಳ್ನಗೆ ನಕ್ಕರು. ಮತ್ತೊಂದು ಹದಿನೈದು ನಿಮಿಷಗಳು ಕಳೆದವು. ಅಷ್ಟು ಸ್ವಲ್ಪ ನಿಮಿಷಗಳು ಮಾಯವಾಗಲು ಅಷ್ಟು ಹೆಚ್ಚಾಗಿ ತೆಗೆದುಕೊಂಡಿದ್ದು ಆಗಲೇ ಎನ್ನಿಸಿತು. ನನ್ನ ಮನುಷ್ಯ ಬರುತ್ತಿದ್ದಾನೆಂಬುದನ್ನು ನಿಲುವುಗನ್ನಡಿಯಲ್ಲಿ ನೋಡಿದೆ. ತನ್ನ ಕಂಠ ಕೌಪೀನದಿಂದ ಬಾಯಿ ಒರೆಸಿಕೊಳ್ಳುತ್ತ ಹುಸಿನಗೆಯಿಂದ ಬರುತ್ತಿದ್ದುದನ್ನು ನೋಡಿದೆ. ಏನೋ ಸ್ವಲ್ಪ ತಿಂದು ಹಾಗೇ ಕಾಫೀ ಕುಡಿದು ಬರಲು ಹೋಗಿದ್ದನೆಂದು ಅವನು ಸ್ವಲ್ಪವೂ ನಾಚಿಕೆಯಿಲ್ಲದೆ ಹೇಳಿದ.

## ಆಯುಷ್ಕರ್ಮ ಕಾಂಡ

ಈಗ ನಾನು ಅನುಭವ ಹೊಂದಿನ ವಧಾಪಶು. ಮೊದಲಿನಷ್ಟು ಹೆದ ರುವದಿಲ್ಲ.

ಕ್ಷೌರಿಕನು ಮಾನವನಿಗೆ ಕೊಡಬೇಕಾದ ಮರ್ಯಾದೆ ಕೊಡದೆ, ಅವನ ಅಸಹಾಯಕತೆಯನ್ನು ದುರುಪಯೋಗಪಡಿಸುತ್ತಾನೆ. ನಡುಗುವ ಕೈಯಲ್ಲಿ ಕತ್ತಿ ಹಿಡಿದು, ಆಟಂ ಬಾಂಬ್, ಕ್ವಿಟ್ ಇಂಡಿಯಾ, ಪಾಕಿಸ್ತಾನ್ ಇವುಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು ಅಂತ ಬೇರೆ ಕೇಳುತ್ತಾನೆ.

ನಾನು ಯಾರಿಗೂ ತಲೆ ಬಾಗುವವನಲ್ಲ. ಯಾರಿಗೂ ತಲೆಬಾಗಿದ ನೆನಪಿಲ್ಲ. ಆದರೆ ನನ್ನ ಕ್ಷೌರಿಕನಿಗೆ ತಲೆಬಾಗಿದ್ದೇನೆಂದು ವಿಧಿಯಿಲ್ಲದೆ ಒಪ್ಪಿಕೊಳ್ಳುತ್ತೇನೆ.

# ತ್ರಿಮೂರ್ತಿಗಳಲ್ಲಿ ಬ್ರಾಹ್ಮಣರ ನಿಯೋಗ

ಬ್ರಾಹ್ಮಣ-ಬ್ರಾಹ್ಮಣೇತರರ ಕಿತ್ತಾಟ, ಜಗಳಗಳಲ್ಲಿ ಬ್ರಾಹ್ಮಣರು ಆರ್ಯರೆಂದೂ, ಅವರು ಉತ್ತರ ಭಾರತಕ್ಕೆ ವಲಸೆ ಹೋಗಬೇಕೆಂದೂ ಕೆಲವು ದ್ರಾವಿಡರು ಹಠ ಹಿಡಿದು ಕೂತಿರುವರು. ಇತ್ತ ಉತ್ತರದಲ್ಲಿ ನೀವು ದಕ್ಷಿಣದವರೆಂದೂ, ಉತ್ತರ ಭಾರತದಲ್ಲಿ ನಿಮಗೆ ಸ್ಥಳವಿಲ್ಲವೆಂದೂ ಹೇಳುತ್ತಿರುವರು. ಹೀಗಾಗಿ ದಕ್ಷಿಣದ ಬ್ರಾಹ್ಮಣರ ಪರಿಸ್ಥಿತಿ ಫುಟ್ ಬಾಲ್‌ನಂತಾಗಿದೆ.

ಈ ವಿಷಮ ಪರಿಸ್ಥಿತಿಯನ್ನು ವಿಮರ್ಶಿಸುವ ಸಲುವಾಗಿ ಬೃಹದ್ ಕರ್ನಾಟಕ ಬ್ರಾಹ್ಮಣ ಮಹಾಸಮಿತಿಯ ಸಭೆಯು ಶ್ರೀರಾಮಪುರದ ರಾಮಾಂಜನೇಯ ದೇವಸ್ಥಾನದಲ್ಲಿ ಸಮಾವೇಶಗೊಂಡಿದ್ದಿತು. ಸಭೆ ಗುಟ್ಟಾಗಿ ಕರೆದಿದ್ದರಿಂದಲೂ ಕೇವಲ ಒಂದು ಪಂಗಡದ ದಾರುಣ ಪರಿ ಸ್ಥಿತಿಯನ್ನು ಸುಧಾರಿಸುವ ಸಲುವಾಗಿ ಸೇರಿದ್ದರಿಂದಲೂ ಪತ್ರಿಕಾ ಪ್ರತಿ ನಿಧಿಗಳಿಗೆ ಮತ್ತು ಪ್ರೇಕ್ಷಕರಿಗೆ ಆಹ್ವಾನವಿದ್ದಿಲ್ಲ. ಹಾಗೂ ಇವರುಗಳಿಗೆ ಈ ಗುಟ್ಟಿನ ಸಭೆಯ ವಿಷಯವೂ ಸಹ ತಿಳಿದಿಲ್ಲ.

ಬ್ರಾಹ್ಮಣರು ಅಲ್ಪಸಂಖ್ಯಾತರೆಂದೂ, ಇತರ ಅಲ್ಪಸಂಖ್ಯಾತರಿಗಿರು ವಂತೆ ತಮಗೂ ಕೆಲವು ಹಕ್ಕು ಬಾಧ್ಯತೆಗಳು ಬೇಕೆಂದು ಕೆಲವರು ವಾದಿಸಿ ದರು. ಇನ್ನು ಕೆಲವರಂತೂ ಪ್ರತ್ಯೇಕ ಬ್ರಾಹ್ಮಣಸ್ಥಾನವನ್ನೇ ನಿರ್ಮಿಸ ಬೇಕೆಂದು ಹಠ ಹಿಡಿದರು ಅದರ ಸಾಧನೆಗಾಗಿ ಬ್ರಾಹ್ಮಣ ರಕ್ತವನ್ನು ಚಲ್ಲಬೇಕೆಂದು ಸಹ ಕೆಲವು ಯುವಕರು ಸಲಹೆ ಇತ್ತರು. ಇನ್ನು ಕೆಲ ವರು ಕೈಲಾಗದವರು ಸತ್ಯಾಗ್ರಹವೇ ಸಾಕೆಂದರು.

## ತ್ರಿಮೂರ್ತಿಗಳಲ್ಲಿ ಬ್ರಾಹ್ಮಣರ ನಿಯೋಗ

ಆದರೆ ಸಭೆಯಲ್ಲಿ ಈ ಎಲ್ಲ ವಿಷಯದಮೇಲೂ ದೀರ್ಘಚರ್ಚೆ ನಡೆದು ಯಾವುದೊಂದಕ್ಕೂ ಬಹುಮತ ದೊರಕಲಿಲ್ಲ. ಹೀಗಾಗಿ ಸಭೆಯನ್ನು ಮಾರನೇದಿನಕ್ಕೆ ಹಾಕಬೇಕೆಂದೊಬ್ಬ ಸದಸ್ಯರು ಹೇಳಿದರು. ಇದು ಗುಟ್ಟಾಗಿ ನಡೆಯಬೇಕಾದ್ದರಿಂದ ವೃಥಾ ಕಾಲಹರಣ ಮಾಡಕೂಡದೆಂದೂ ಇಂದೇ ಯಾವುದಾದರೊಂದು ಇತ್ಯರ್ಥವಾಗಲೇಬೇಕೆಂದು ಅಧ್ಯಕ್ಷರು ಘರ್ಜಿಸಿದರು.

ಇಷ್ಟರಲ್ಲಿ ಆಚಾರ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುವ ಹಾಗೂ ವೇದಾಭ್ಯಾಸದ ಸಂಪೂರ್ಣ ಅರಿವಿದ್ದು ಬ್ರಾಹ್ಮಣಿಕೆಯಲ್ಲಿ ಸಂಪೂರ್ಣ ನಂಬಿಕೆ ಇರುವವರಾದ ವೇದಬ್ರಹ್ಮಶ್ರೀ ತಿಪ್ಪಾಭಟ್ಟರು ಎದ್ದುನಿಂತು ಈ ಕೆಳಗಿನ ಠರಾವನ್ನು ಸಭೆಯ ಮುಂದಿಟ್ಟರು.

"ಈ ಜಗತ್ತು ನಶ್ವರ. ಎಂದಾದರೊಂದು ದಿನ ಇಹಲೋಕದ ವ್ಯಾಪಾರವನ್ನು ಬ್ರಾಹ್ಮಣನಾಗಲೀ—ಬ್ರಾಹ್ಮಣೇತರನಾಗಲೀ ತ್ಯಜಿಸಲೇ ಬೇಕು. ಆದುದರಿಂದ ಇಲ್ಲಿನ ಸುಖ, ಭೋಗ, ಐಶ್ವರ್ಯಗಳ ಲಾಲಸೆ ತೊರೆದು ಶಾಶ್ವತ ಸುಖಕ್ಕಾಗಿ (ಸ್ವರ್ಗ) ಪ್ರಯತ್ನಿಸಬೇಕು. ಇದಕ್ಕಾಗಿ ತ್ರಿಮೂರ್ತಿಗಳಾದ (ಸ್ಟಾರ್ಲಿ, ಟ್ರೊರ್ಮ ಆಟ್ಲೆ ಅಲ್ಲ) ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಒಂದು ನಿಯೋಗ ಹೋಗಬೇಕು."

ಈ ಠರಾವು ಇಡೀ ಸಭೆಯನ್ನೇ ಆಕರ್ಷಿಸಿತು ಎಲ್ಲರೂ ಇದೊಂದು ಸಮಸ್ಯಾ ಪರಿಹಾರಮಾರ್ಗವೆಂದು ತಿಳಿದರು. ಕೊನೆಗೆ ಠರಾವು ವಿರೋಧವಿಲ್ಲದೇ ಸ್ವೀಕೃತವಾಯಿತು ಮತ್ತು ನಿಯೋಗದ ನಾಯಕರು ವೇದಬ್ರಹ್ಮಶ್ರೀ ತಿಪ್ಪಾಭಟ್ಟರೇ ಇರಬೇಕೆಂದೂ ತೀರ್ಮಾನಿಸ ಲಾಯಿತು.

ಬೃಹತ್ ಕರ್ನಾಟಕ ಬ್ರಾಹ್ಮಣರ ಮಹಾಸಭೆ ನಿಯೋಗದ ನಾಯಕರಾದ ಶ್ರೀ ತಿಪ್ಪಾಭಟ್ಟರು ಮೊದಲು ವೈಕುಂಠಕ್ಕೆ ಹೋಗಿ ಶ್ರೀ ಮಹಾವಿಷ್ಣುವನ್ನು ಕಂಡು ದಕ್ಷಿಣದಲ್ಲಿ ಬ್ರಾಹ್ಮಣರಿಗಾಗುತ್ತಿರುವ

ಕಷ್ಟಪರಂಪರೆಗಳನ್ನು ವರ್ಣಿಸಿ ಸಭೆಯಲ್ಲಾದ ನಿರ್ಣಯ ಮತ್ತು ತಾವು ಬಂದಿರುವ ಉದ್ದಿಶ್ಯವನ್ನು ನಿವೇದಿಸಿಕೊಂಡರು.

ಲಕ್ಷ್ಮೀಪತಿಯು ಎಲ್ಲವನ್ನೂ ಸಾವಧಾನವಾಗಿ ಕೇಳಿ ಬ್ರಾಹ್ಮಣರ ಕಷ್ಟಕ್ಕಾಗಿ ಮರುಗಿ ಇಂತೆಂದನು. ವಿಪ್ರೋತ್ತಮನೇ ಕೇಳು,

ನಾನು ಎತ್ತಬೇಕೆಂದಿದ್ದ ದಶಾವತಾರಗಳಲ್ಲಿ ಕಲ್ಕ್ಯವತಾರ ಒಂದನ್ನುಳಿದು ಇನ್ನು ಒಂಭತ್ತು ಪೂರೈಸಿವೆ. ಮೊದಲಿನವೆರಡು ಮೃಗ' ಅರ್ಧಮೃಗಗಳಾದ್ದರಿಂದ ಅದು ಅಷ್ಟಾಗಿ ಮಾನವಕುಲಕ್ಕೆ ಸಂಬಂಧಿಸಿದುದಲ್ಲ. ಅನಂತರ ಬ್ರಾಹ್ಮಣರಿಗೆ ಸಹಾಯ ಮಾಡಬೇಕೆಂಬ ಸ್ಥಿರ ಸಂಕಲ್ಪದಿಂದ ಪರಶುರಾಮಾವತಾರವೆತ್ತಿದೆ. ಜಗತ್ತನ್ನೇ ನಡುಗಿಸಿದೆ. ಕ್ಷತ್ರಿಯರ ಕುಲವನ್ನೇ ನಾಶಮಾಡಲು ಪ್ರಯತ್ನಿಸಿದೆ. ಇದರಿಂದಾಗಿ ಈ ಅವತಾರದಲ್ಲಿ ನನಗೆ ಹೆಚ್ಚಾಗಿ ಖ್ಯಾತಿ ಬರಲಿಲ್ಲ. ಇದರ ನಂತರ ವಾಮನಾವತಾರದಲ್ಲಿ ಬಲಿಯನ್ನು (ದ್ರಾವಿಡ)—ಮೂರು ಹೆಜ್ಜೆ ಭೂಮಿ ಕೇಳಿ ಆಕಾಶ, ಭೂಮಿ, ಎಲ್ಲವನ್ನೂ ಆಕ್ರಮಿಸಿದೆ. ಅಷ್ಟೆ ಅಲ್ಲ. ಮೂರನೆ ಹೆಜ್ಜೆಗೆ ಅವನನ್ನು ಪಾತಾಳಕ್ಕೆ ತುಳಿದೆ. ಇದರಿಂದಾಗಿ ಮೋಸಗಾರನೆಂದು ನನಗೆ ಅಪಖ್ಯಾತಿ ಬಂದಿತು. ಹೀಗಾಗಿ ಬ್ರಾಹ್ಮಣಾವತಾರಗಳಲ್ಲಿ ನನ್ನ ಪ್ರಭಾವವೇ ಕಡಿಮೆಯಾಗುತ್ತಾ ಬಂದಿತು. ನನ್ನ ಭಕ್ತಾದಿಗಳೆಲ್ಲರೂ ಈಶ್ವರನನ್ನು ಆರಾಧಿಸಲು ಆರಂಭ ಮಾಡಿದರು. ಅನಂತರ ನಾನು ಹೂಡಿದ ಉಪಾಯವನ್ನು ದಯವಿಟ್ಟು ಕೇಳು.

ಬ್ರಾಹ್ಮಣೇತರನೂ, ಕ್ಷತ್ರಿಯವಂಶದ ಶ್ರೇಷ್ಠಪುರುಷನೂ ಆದ ಆ ಅಯೋಧ್ಯದ ಚಕ್ರವರ್ತಿ ದಶರಥರಾಜನ ಹಿರಿಯಪುತ್ರನಾಗಿ ಹುಟ್ಟಿದೆ. ಶ್ರೀರಾಮನೆಂದು ನಾಮಕರಣ ಮಾಡಿದರು. ನನ್ನ ಸಹೋದರರೆಲ್ಲರೂ ನನಗೆ ವಿಧೇಯರಾಗಿದ್ದರು- ಕೆಲವುಕಾಲ ವನವಾಸವನ್ನೇನೋ ಅನುಭವಿಸಿದೆ ದಿಟ. ಆದರೇನು ? ಜಗತ್ತೇ ನನ್ನನ್ನು ಆರಾಧಿಸಲು ಶುರು ಮಾಡಿತು. ಯುಗ ಯುಗಗಳು ಕಳೆದರೂ ಸಹ ನನ್ನ ಕೀರ್ತಿ ಅಜರಾ

ಮರವಾಗಿದೆ. ಇದಾದ ಮೇಲೆ ಕೃಷ್ಣಾವತಾರದಲ್ಲಿ ಈ ಕೀರ್ತಿ ಯಶಸ್ಸು ದ್ವಿಗುಣವಾಯಿತು. ಅಂದು ಬೋಧಿಸಿದ ನನ್ನ ಗೀತೆ ಎಂದೆಂದಿಗೂ ಜಗತ್‌ಶಾಂತಿಗೆ ಮಾರ್ಗದರ್ಶಕವಾಗಿದೆ ಎಂದು ಜನರು ಹೇಳುತ್ತಿರುವರು. ಇದೂ ಹೋಗಲಿ ನೀನೇ ಹೇಳು ಬುದ್ಧನಾಗಿ ಹುಟ್ಟಿದ್ದರಿಂದ ನನಗೆ ಎಷ್ಟು ಭಕ್ತಾದಿಗಳು ದೊರೆತರು ? ಅಷ್ಟೇ ಅಲ್ಲ ಬ್ರಾಹ್ಮಣಾವತಾರದಲ್ಲಿ ಪಡೆದ ಅಪ ಕೀರ್ತಿ, ನಿಂದನೆಗಳೆಲ್ಲಾ ಮಾಯವಾದವು. ಹೀಗಾಗಿ ಬ್ರಾಹ್ಮಣಾವತಾರ ಗಳನ್ನು ಎತ್ತುವುದನ್ನೇ ನಿಲ್ಲಿಸಿದೆ.

ಇದೆಲ್ಲ ಕೇಳಿದ ತಿಪ್ಪಾಭಟ್ಟರು ಮಂಕಾಗಿ ಕೂತರು. ಅನಂತರ ವಿಷ್ಣುವು ಮುಂದುವರಿಸಿ ಈರೀತಿ ಹೇಳಿದನು.

ಅಯ್ಯಾ ತಿಪ್ಪಾಭಟ್ಟರೆ, ನಿಜವಾಗಿಯೂ ನಿಮ್ಮ ಕರುಣಾ ಜನಕ ಸ್ಥಿಯನ್ನು ನೋಡಿದರೆ ನನಗೆ ಸಂಕಟವಾಗುವುದು. ಆದರೇನುಮಾಡಲಿ ನಿಮಗೆ ಸಹಾಯ ಮಾಡಿದರೆ ನನ್ನನ್ನು ಭೂಲೋಕದಲ್ಲಿ ಕೇಳುವವರೇ ಇಲ್ಲವಾಗುವುದು. ಒಂದು ವಿಷಯ ಈಶ್ವರ ವಿಚಾರಗಳನ್ನು ವಿಮರ್ಶೆ ಮಾಡದೆ ಕೇಳಿದವರಿಗೆಲ್ಲ ವರ ನೀಡುವುದು ಅವನ ಸ್ವಭಾವ. ಆದ್ದರಿಂದ ಅವನಲ್ಲಿಗೆ ನೀವು ಬಂದಿರುವ ಕಾರ್ಯ ತಿಳಿಸದೇ ವರವನ್ನು ಕೇಳಿ. ನಿಮ್ಮ ಕೆಲಸ ಸಾಧಿತವಾದರೂ ಆಗಬಹುದು.

ವಿಷ್ಣುವು ಹೆಂಡತಿ ಮಾತು ಕೇಳುವನೆಂದು ತಿಪ್ಪಾಭಟ್ಟರ ನಂಬಿಕೆ. ಮೆತ್ತಗೆ ಲಕ್ಷ್ಮಿಯನ್ನು ತಮ್ಮ ಕಷ್ಟ ನಿವಾರಿಸಬೇಕೆಂದು ನಿವೇದಿಸಿದರು. ಆದರೆ ಲಕ್ಷ್ಮಿಯು "ನೀವು ಶಾರದೆಯ ಪಕ್ಷಪಾತಿಗಳಾದ್ದರಿಂದ ಭೂಲೋಕ ದಲ್ಲೂ ಸಹ ನಿಮಗೆ ನಾನು ಸಹಾಯ ಮಾಡಿಲ್ಲ. ಅಂತಹುದರಲ್ಲಿ ಈಗ ನಾನು ಖಂಡಿತ ಏನೂ ಮಾಡುವುದಿಲ್ಲ" ಎಂದು ಹೇಳಿ ನಿಯೋಗದ ನಾಯಕರಿಗೆ ಮುಖಭಂಗ ಮಾಡಿದಳು.

ವೈಕುಂಠದಲ್ಲಿ ಆದ ಅಪಜಯಕ್ಕೆ ಜಗ್ಗದ ತಿಪ್ಪಾಭಟ್ಟರು ಕೈಲಾಸಕ್ಕೆ ತೆರಳಿದರು. ಅಲ್ಲಿ ಪಾರ್ವತೀ ಸಮೇತನಾದ ಈಶ್ವರನು ನಂದಿ, ಭೃಂಗಿ, ಬಸವೇಶ್ವರರೊಡಗೂಡಿ ಕುಳಿತಿದ್ದನು. ಕೆಲವು ಗಣಗಳು ಇವನ ಆಗ

ಮನದ ಉದ್ದಿಶ್ಯವನ್ನು ತಿಳಿದಿದ್ದರಿಂದ ಇಲ್ಲಿ ಬ್ರಾಹ್ಮಣರಿಗೆ ಸ್ಥಳವಿಲ್ಲವೆಂದು ಕೈಲಾಸದೊಳಗೆ ಕಾಲಿಡಕೂಡದೆಂದೂ ತಿಪ್ಪಾಭಟ್ಟರಿಗೆ ಖಡಾಖಂಡಿತವಾಗಿ ತಿಳಿಸಿದವು.

ಹಾಗೂ ಹೀಗೂ ಬಹು ಪ್ರಯಾಸಪಟ್ಟು ನಿಯೋಗದವರು ಕೈಲಾಸ ವನ್ನು ಪ್ರವೇಶಿಸಿದರು ಆದರೆ ಅಲ್ಲಿನ ವಾತಾವರಣ, ಪರಿಸ್ಥಿತಿಗಳನ್ನು ನೋಡಿ ನಿಯೋಗದ ನಾಯಕರಿಗೆ ಆಶಾಭಂಗವಾಯಿತು. ಕರ್ನಾಟಕಕ್ಕೂ, ಕೈಲಾಸಕ್ಕೂ ಸ್ವಲ್ಪವೂ ವ್ಯತ್ಯಾಸವಿಲ್ಲವೆಂದು ಶ್ರೀ ತಿಪ್ಪಾಭಟ್ಟರಿಗೆ ಮಂದಟ್ಟಾ ಯಿತು. ಕೊನೆಗೆ ಈಶ್ವರನನ್ನು ಭೇಟಿ ಮಾಡುವುದರಿಂದ ಯಾವ ಪ್ರಯೋಜನವೂ ಆಗದೆಂದು ಬ್ರಾಹ್ಮಣ ನಾಯಕರು ಹಾಗೆಯೇ ಹಿಂದಿರುಗಿದರು.

ಬ್ರಾಹ್ಮಣರು ಬ್ರಹ್ಮನ ಮುಖದಿಂದ ಜನಿಸಿರುವುದರಿಂದ ಬ್ರಹ್ಮನಿಗೆ ತಮ್ಮಲ್ಲಿ ಬಹಳ ಪ್ರೀತಿ ಎಂದು ತಿಪ್ಪಾಭಟ್ಟರು ತಿಳಿದರು. ವೈಕುಂಠ, ಕೈಲಾಸಗಳಲ್ಲಾದ ಸೋಲಿಗೆ ಧೃತಿಗೆಡದೆ ಬ್ರಾಹ್ಮಣರ ಮಿತ್ರ ಬ್ರಹ್ಮನನ್ನು ಕಾಣಲು ನಿಯೋಗದವರು ಹೊರಟರು.

ಬ್ರಹ್ಮನ ಸಂದರ್ಶನ ಪಡೆದು ನಮಸ್ಕರಿಸಿದರು. ಹಿಂದಿನಂತೆಯೇ ತಮ್ಮ ಕಷ್ಟಗಳನ್ನು ನಿವೇದಿಸಿ ಸ್ವರ್ಗದಲ್ಲಾದರೂ ಸ್ಥಳ ಕೊಡಬೇಕೆಂದು ಭೂಲೋಕದ ವಿಪ್ರರ ಪರವಾಗಿ ಪ್ರಾರ್ಥಿಸಿದರು.

ತ್ರಿಮೂರ್ತಿಗಳಲ್ಲೆಲ್ಲಾ ಚಿಕ್ಕವನಾದ ಬ್ರಹ್ಮನು ನಿಯೋಗದ ಅಹ ವಾಲನ್ನು ಕೇಳಿ ಇಂತೆಂದನು.

ಭೂಸುರ ನಾಯಕರೆ,

ನನ್ನ ಮುಖದಿಂದ ಜನಿಸಿ ನನಗೆ ಪ್ರೀತಿಪಾತ್ರರಾಗಿರುವ ನಿಮಗೆ ಇಂತಹ ಕಷ್ಟ, ಕಾರ್ಪಣ್ಯಗಳು ಒದಗಿರುವುದನ್ನು ನೋಡಿ ನನ್ನ ಮನಸ್ಸು ಕರಗಿ ನೀರಾಗಿಹೋಗಿದೆ. ನಾನು ಹೆಸರಿಗೆ ಸ್ವರ್ಗಾಧಿಪತಿ ಯಾದರೂ ನಮ್ಮಪ್ಪನಾದ ವಿಷ್ಣುವಿನ ಮಾತನ್ನು ಮೀರಲು ನನಗೆ ಸ್ವಲ್ಪವೂ ಅಧಿಕಾರವಿಲ್ಲ. ಕೇವಲ ಅವನ ಕೈಗೊಂಬೆ ಎಂದು ಹೇಳಬೇಕಾ

ಗಿದೆ. ನನಗೆ ಸೀವಾದರೋ ಭೂಲೋಕದಲ್ಲಿ ಹವಿರ್ಭಾಗವನ್ನು ಕೊಡು ತ್ತಿಲ್ಲ. ಪೂಜೆ ಪುನಸ್ಕಾರಗಳನ್ನು ಸಲ್ಲಿಸುತ್ತಿಲ್ಲ. ಇದರಿಂದಾಗಿ ನನಗೆ ಯಾವ ಶಕ್ತಿಯೂ ಇಲ್ಲವಾಗಿದೆ. ಆದುದರಿಂದ ನಿಮ್ಮ ಕಷ್ಟ ಪರಿಹಾರ ಮಾಡಲು ನಾನು ನಿಶ್ಶಕ್ತನಾಗಿದ್ದೇನೆ.

ಹೀಗೆಂದು ಬ್ರಹ್ಮನು ಸ್ವಲ್ಪವೂ ಸಂಕೋಚವಿಲ್ಲದೇ ತನ್ನ ನಿಜ ಪರಿಸ್ಥಿತಿಯನ್ನು ಹೇಳಿಯೇಬಿಟ್ಟನು.

ಈಗ ಬ್ರಾಹ್ಮಣರಿಗೆ ಕೈಲಾಸದಲ್ಲಾಗಲೀ, ವೈಕುಂಠದಲ್ಲಾಗಲೀ, ಸ್ವರ್ಗದಲ್ಲಾಗಲೀ ಸ್ಥಳವಿಲ್ಲವೆಂಬುದು ನಿರ್ಧಾರವಾದ ಹಾಗಾಯಿತು. ಇಷ್ಟು ದೂರ ಬಂದಿದ್ದೇ ಆಗಿದೆ. ಶಾರದಾದೇವಿಯನ್ನು ನೋಡಿಕೊಂಡೇ ಹೋಗೋಣವೆಂದು ನಾಯಕರು ಮನಸ್ಸು ಮಾಡಿದರು. ಇಷ್ಟರ ಹೊತ್ತಿಗೆ ಗಾಳಿ ಸಂಚಾರಕ್ಕಾಗಿ ಹೋಗಿದ್ದ ಶಾರದಾದೇವಿಯವರು ಚಿತ್ತೈಸಿದರು. ವಿಪ್ರನಾಯಕರು ಶಾರದೆಗೆ ನಮಸ್ಕರಿಸಿ ತಮಗಾದ ಸೋಲಿನ ಪರಂಪರೆಯನ್ನು ವಿವರಿಸಿ ಸಾಧ್ಯವಾದಷ್ಟು ಸಹಾಯ ಮಾಡ ಬೇಕೆಂದು ಬಿನ್ನವಿಸಿಕೊಂಡರು. ವಿದ್ಯಾಧಿದೇವತೆಯು ಇವರ ಸ್ಥಿತಿಗತಿ ಗಳನ್ನು ನೋಡಿ ಮರುಕಪಟ್ಟು ಇಂತೆಂದಳು.

ಬ್ರಾಹ್ಮಣ ನಾಯಕರೆ, ತ್ರಿಮೂರ್ತಿಗಳೇ ನಿಮಗೆ ಸ್ವಲ್ಪವೂ ಸಹಾಯ ಮಾಡದೇ ಇರುವ ಸಂದರ್ಭದಲ್ಲಿ ನಾನು ಏನುತಾನೇ ಮಾಡಬಲ್ಲೆ. ಶಾಶ್ವತವಾದ ಸ್ವರ್ಗಸುಖವನ್ನು ಕೊಡುವ ಭಾಗ್ಯ ನನಗಂತೂ ಇಲ್ಲ. ಆದರೂ ನಿಮಗೆ ನಾನು ಒಂದು ವರ ಕೊಡುತ್ತೇನೆ. ತೆಗೆದುಕೊಳ್ಳಿ.

ನಾನು ವಿದ್ಯೆಗೆ ಅಧಿಪತಿಯಾಗಿರುವುದರಿಂದ ನೀವುಗಳೆಲ್ಲರೂ ಭೂಲೋಕದಲ್ಲಿ ವಿದ್ಯಾವಂತರಾಗಿ ಬಾಳಿ. ಎಂದಿನವರೆಗೆ ವಿದ್ಯೆಯ ಸದುಪ ಯೋಗಪಡಿಸಿಕೊಳ್ಳುವಿರೋ ಅಲ್ಲಿನವರೆಗೆ ಸುಖ ಶಾಂತಿಯನ್ನು ಅನು

ಭವಿಸುವಿರಿ. ಅದೇ ವಿದ್ಯೆಯನ್ನು ದುರ್ವಿನಿಯೋಗಪಡಿಸಿಕೊಂಡಲ್ಲಿ ಮತ್ತೆ ಹಾನಿ ತಪ್ಪಿದ್ದಲ್ಲ.

ಈ ವರವನ್ನು ಕೇಳಿ ತಿಪ್ಪಾಭಟ್ಟರಿಗೆ ಇದ್ದಿದ್ದರಲ್ಲಿ ತೃಪ್ತಿಯಾಯಿತು. ಶಾರದಾದೇವಿಗೆ ನಮಸ್ಕರಿಸಿ ಭೂಲೋಕಕ್ಕೆ ಹಿಂತಿರುಗಿದರು. ಮಾರನೇ ದಿನ ತಮ್ಮ ನಿಯೋಗದ ಸಂಪೂರ್ಣ ವಿಚಾರವನ್ನು ಸಭೆಯ ಮುಂದಿಟ್ಟು ವಿದ್ಯೆಯು ದುರುಪಯೋಗಪಡಿಸಿಕೊಳ್ಳಕೂಡದೆಂದು ತಿಳಿಸಿದರು.

# ಆ ಭಾನುವಾರ

ನನ್ನ ಲೇಖನದ ಶಿರೋನಾಮೆಯನ್ನು ನೋಡಿ ನೀವು ಚಕಿತರಾಗಿರ ಬಹುದು. ಆದರೆ ಏನು ? ಸೋಮವಾರದ ಪ್ರಾತಃಕಾಲದ ನನ್ನ ಪರಿಸ್ಥಿತಿಯ ಗಂಟನ್ನು ಬಿಚ್ಚಲು ಯತ್ನಿಸುತ್ತೇನೆ. ನೋಡಿದರೆ ನೋಡಿ; ಬಿಟ್ಟರೆ ಬಿಡಿ.

ಶನಿವಾರ ಮಧ್ಯಾಹ್ನ ನಮ್ಮ ಕಛೇರಿಗೆ ಬಿಡುವು. ಭಾನುವಾರ ಸಂಪೂರ್ಣ ರಜ. ಆದರೆ ಒಂದುವರೆ ದಿನ ಅನುಭವಿಸಿದ ರಜದಿಂದ ಮತ್ತೆ ಆಫೀಸಿಗೆ ಹೋಗಬೇಕೆಂದರೆ...........ಸೊಸೆಯು ತವರುಮನೆಯಿಂದ ಅತ್ತೆಯ ಮನೆಗೆ ಹೋಗುವಾಗಲೂ ಇಷ್ಟು ದುಃಖವಾಗಲಿಕ್ಕಿಲ್ಲ. ಚಾತಕ ಪಕ್ಷಿಯು ಮಳೆಯನ್ನು ಇದಿರು ನೋಡುವಂತೆ ಆಫೀಸಿನಲ್ಲಿ ನಾವಾದರೂ ಭಾನುವಾರವನ್ನು ಇದಿರು ನೋಡುತ್ತಿರುತ್ತೇವೆ. ಮತ್ತು ವಾರದಲ್ಲಿ ಏಳು ದಿವಸಗಳನ್ನು ಭಾನುವಾರ ಮಾಡೆಂದು ಹಲವು ದೇವರಿಗೆ ಹರಕೆ ಕಟ್ಟುತ್ತೇವೆ. ಆದರೇನು ? ಆ ಭಾನುವಾರವು ಬರುವುದು ಒಂದೇ ! ಆ ದಿವಸದಲ್ಲಿ ಯಾವ ಕೆಲಸವನ್ನೂ ಮಾಡದೆ ಕೇವಲ ಸುಖದಲ್ಲಿಯೇ ಕಾಲ ಕಳೆಯಬೇಕೆಂಬ ಬಯಕೆ. ಆದರೆ ಒಂದು ವಾರದಲ್ಲಿಯಾದರೂ ನನ್ನ ಬಯಕೆಯು ಈಡೇರಿರುವುದಿಲ್ಲ.

ಇರಲಿ. ನನ್ನ ಒಂದೇ ಒಂದು ಭಾನುವಾರದ ಅನುಭವವನ್ನು ಹೇಳುತ್ತೇನೆ. ಆ ದಿವಸ ಹೇಗಾದರೂ ಮಾಡಿ, ದಿನವೂ ಆರು ಗಂಟೆಗೆ ಏಳುವ ನಾನು ಒಂಬತ್ತು ಗಂಟೆಗೆ ಏಳಬೇಕೆಂದು ಮಾಡಿದೆ. ಆದರೆ ರಾತ್ರಿ, ಸುಮಾರು ಎರಡು ಗಂಟೆಯ ಹೊತ್ತಿನಲ್ಲಿ ಎರಡು ಬೆಕ್ಕುಗಳು ಎಲ್ಲ ತಾಳ, ರಾಗ, ಮತ್ತು ಲಯಗಳ ಶಾಸ್ತ್ರಗಳನ್ನು ಧಿಕ್ಕರಿಸಿ ಕೂಗಲಾರಂಭಿಸಿ

ದುವು. ಏನೋ, ಸ್ವಲ್ಪ ಹೊತ್ತು ಕೂಗಿ ಸುಮ್ಮನಾಗಬಹುದೆಂದು ಕಣ್ಣು ಮುಚ್ಚಿದೆನು. ಆದರೆ ? ನನ್ನ ಮೇಲಿನ ಹೊಟ್ಟೇಕಿಚ್ಚಿನಿಂದ ಇನ್ನೂ ಕಿರುಚುವಿಕೆಯು ಹೆಚ್ಚಾಯಿತು. ನನ್ನ ತಾಳ್ಮೆಯ ಆಣೆಕಟ್ಟು ಒಡೆದು ಚೂರಾಯಿತು. ಯೋಧನು ತನ್ನ ಆಜನ್ಮ ಶತ್ರುವನ್ನು ಬೆನ್ನಟ್ಟುವಂತೆ ಬೆತ್ತವನ್ನು (**Walking-stick**) ತೆಗೆದುಕೊಂಡು ನುಗ್ಗಿದೆನು. ಒಳ್ಳೆಯ ಗುರಿಯಿಂದಲೇ ಹೊಡೆದೆನು. ಶತ್ರುಪಕ್ಷವು ಪಲಾಯನವಾಗಿದ್ದಿತು. ಆದರೆ ಮೂರು ದಿವಸದ ಹಿಂದೆ ತಂದಿದ್ದ ಟೇಬಲ್ ಲ್ಯಾಂಪ್ ಗುರಿಗೆ ಆಹುತಿಯಾಗಿ ಒಡೆದು ಚೂರಾಗಿ ನನ್ನ ಹೆಂಡತಿಯ ಮೇಲೆ ಬಿತ್ತು. ಪ್ರಳಯವಾಯಿತೆನ್ನುವಂತೆ ಅವಳು ಚಿಟ್ಟನೆ ಚೀರಿದಳು. ಕಳ್ಳರು ಬಂದಿದ್ದಾರೆಂದು ನೆರೆಹೊರೆಯವರನ್ನು ಎಬ್ಬಿಸುವುದಕ್ಕೆ ಹವಣಿಸುತ್ತಿದ್ದಳು. ನಾನು ಕಳ್ಳನಲ್ಲವೆಂದೂ ಅಗ್ನಿ ಸಾಕ್ಷಿಯಾಗಿ ಕೈಹಿಡಿದ ಗಂಡನೆಂದೂ ತಿಳಿಸುವುದರಲ್ಲಿ ನನ್ನ ಮೈ ಬೆವರಿಟ್ಟಿತು ನನ್ನ ಹೆಂಡತಿಯು ಯಾವಾಗಲೂ ಸ್ವಲ್ಪ **water-works** ಅಂದರೆ ಅವಳ ಕಣ್ಣುಗಳಲ್ಲಿ ನೆನೆದ ಮಾತ್ರಕ್ಕೆ ಗಂಗೆಯು ಅವತಾರವಾಗುತ್ತೆ. ಧಾರವಾಡ ಮತ್ತು ಹುಬ್ಬಳ್ಳಿ ಮುನಿಸಿಪಾಲಿಟಿಯವರು ಈ ಗುಟ್ಟನ್ನು ಸಾಧಿಸಬಾರದೇ! ಈ ಪ್ರಕರಣವು ಇಲ್ಲಿಗೆ ನಿಲ್ಲಲಿಲ್ಲ. ಅವಳನ್ನು ಸಮಾಧಾನ ಮಾಡುವುದಕ್ಕೆ ನನ್ನ ಜೇಬಿನಲ್ಲಿದ್ದ ೫೨ ರೂಪಾಯಿಗೆ ಸಂಚಕಾರ ಬಿತ್ತು. ಒಂದು ಸಿಲ್ಕು ಸೀರೆಯನ್ನು ತಂದುಕೊಡುತ್ತೇನೆಂದು ಹೇಳಿ ಸಮಾಧಾನಪಡಿಸಿದ್ದಾಯಿತು. ಯಾವಾಗಲೂ ಹೀಗೆಯೇ. **what man possesses woman dispossesses.**

ಏನಾದರೂ ಆಗಲಿ, ರಾತ್ರಿ ನಿದ್ದೆಯಿಲ್ಲದ್ದರಿಂದ ಬೆಳಿಗ್ಗೆ ಒಂಬತ್ತು ಗಂಟೆಗೆ ಎದ್ದರಾಯಿತೆಂದೂ ಯಾರು ಬಂದರೂ ನನ್ನ ನಿನ್ನ ನಿದ್ರಾಭಂಗ ಮಾಡಕೂಡದೆಂದೂ ಅಧಿಕಾರಯುಕ್ತ ವಾಣಿಯಿಂದ ಹೆಂಡತಿಗೆ ಹೇಳಿ ಮಲಗಿದೆನು.

"ಸರ್, ಇದ್ದಾರೇನ್ರಿ ?"

"ಯಾರವರು ?"

"ನಾನು, ರಾಯರಿದ್ದಾರೇನ್ರಿ ?"

"ಹುಂ ಮಲಗಿದ್ದಾರೆ, ಎಬ್ಬಿಸುವ ಹಾಗಿಲ್ಲ."

ಮೇಲಿನ ಸಂಭಾಷಣೆಯು ಎಲ್ಲಿಯೋ ದಿಗಂತದ ಮೂಲೆಯಿಂದ ಕೇಳಿಬಂತು. ಹೊರಗೆ ಯಾರೋ ನನ್ನ ಹೆಂಡತಿಯೊಂದಿಗೆ ಮಾತಾಡುತ್ತಿದ್ದರು. ಮತ್ತೆ ಸಂಭಾಷಣೆ ಮುಂದುವರಿಯಿತು.

"ಅತ್ಯಗತ್ಯವಾಗಿ ನೋಡಬೇಕಾಗಿದೆ. ಬಹಳ Urgent" ನನ್ನ ಹೆಂಡತಿಯು ಬಂದು,

"ರೀ, ಯಾರೋ ಬಂದಿದ್ದಾರೆ !"

"ಸಾಯಲಿ."

"ಯಾರು ?"

"ನೀನಲ್ಲ. ಹೊರಗೆ ಬಂದವರು !"

"ಏನಾರ ಆಗ್ಲಿ, ಅವರನ್ನು ಮಾತಾಡಸ್ರಿ, ಭಾಳ ಅರ್ಜಂಟ್ ಅಂತೆ !"

ಒಟಗುಟ್ಟುತ್ತಾ ಬಿಡಲಾರದ ಕಣ್ಣುಗಳನ್ನು ಬಿಡುತ್ತಾ ಎದ್ದು ಹೊರಗೆ ಬಂದೆನು. ಹೊರಗೆ ಬಂದಿದ್ದವರು ಅಪರಿಚಿತರು. ನಮಸ್ಕಾರ ಚಮತ್ಕಾರಗಳಾದ ಮೇಲೆ—

"ನೀವೇಯೇನು ಕ್ರಿಷ್ಟ್ರಾಯರು" ಎಂತ ಹೊಸಬರೆಂದರು.

"ಹೌದು."

"ಏನು ಇಲ್ಲ ನಿಮ್ಮ ಮೇಲೆ ಒಂದು ಸಮನ್ಸ್ ಬಂದಿದೆ. ನಿಮ್ಮ ಮೇಲೊಬ್ಬರು ೨೦೦ ರೂಪಾಯಿಗಳಿಗೆ ದಾವೆ ಮಾಡಿದ್ದಾರೆ. ಹಣವನ್ನು ಕೊಡಬೇಕು; ಇಲ್ಲವಾದರೆ ನನ್ನೊಡನೆ ಬರಬೇಕು."

ಸಿಡಿಲು ಬಡಿದ ಹೆಮ್ಮರದಂತೆ ಉರುಳುವುದರಲ್ಲಿದ್ದೆನು. ಅರ್ಧಾಂಗಿಗೆ ಈಗಲೇ ಬರುವನೆಂದು ತಿಳಿಸಿ ಅಂಗಿ ರುಮಾಲು ಹಾಕಿಕೊಂಡು ಠಾಣೆಯ ಕಡೆಗೆ ಹೊರಟೆನು. ಬಂದ ಭೇಲಿಫ(ಅಮೀನ)ನು ನನ್ನೊಡನೆ ಮೌನ

ವಾಗಿ ಹಿಂಬಾಲಿಸಿದನು. ನಾನು ಎಲ್ಲಿಯೂ ಸಾಲಮಾಡಿದವನಲ್ಲ (ಏಕೆಂದರೆ ಯಾರೂ ನನಗೆ ಸಾಲ ಕೊಡುವುದಿಲ್ಲ !) ಯಾರಿಗೂ ಹೊಣೆಗಾರನಾದವನಲ್ಲ ! (ನನ್ನ ಹೊಣೆಗಾರಿಕೆಗೆ ಯಾರೂ ಒಪ್ಪುವುದಿಲ್ಲ) ಹಾಗಾದರೆ ಯಾವ ಹಣಕ್ಕೆ ನನ್ನ ಮೇಲೆ ದಾವೆಯಾಗಿರಬೇಕು ? ಚಳಿಗಾಲದ ಮುದುಕಿಯಂತೆ ನಡುಗುತ್ತ ಬೇಲಿಫನನ್ನು ಸಮನ್ಸ್ ತೋರಿಸುವುದಕ್ಕೆ ಕೇಳಿದೆನು. ಸಮನ್ಸ್‌ನಲ್ಲಿ ವಾದಿಯು ಒಬ್ಬ ಮಾರ್ವಾಡಿಯಾಗಿದ್ದನು. ಪ್ರತಿವಾದಿಯ ಹೆಸರು ಕೃಷ್ಣರಾವ್ ಎಂತಲೇ ಇತ್ತು. ನನ್ನ ಹೆಸರಿನ ಹಿಂದೆ 'ಎನ್' ಎಂತ ಹಚ್ಚಿಕೊಳ್ಳುತ್ತೇನೆ. ಆದರೆ ಸಮನ್ಸ್‌ನಲ್ಲಿ 'ಎಮ್' ಎಂತ ಇತ್ತು. ಇದು ಇಂಗ್ಲೀಷಿನಲ್ಲಿ ಇದ್ದುದರಿಂದ ಒಂದು ಗೆರೆ ಮಾತ್ರ ವ್ಯತ್ಯಾಸ. ದಾವೆಯ ನಕಲನ್ನು ನೋಡಿದಾಗ, ಅಲ್ಲಿ ಮಲಯನೂರು ಕೃಷ್ಣರಾವ್ ಎಂತ ಇತ್ತು. ಅವನು ಮಗ್ಗುಲುಮನೆಯ ಗೃಹಸ್ಥ. ನನ್ನ ಕಣ್ಣುಗಳು ಕೆಂಪಗಾದವು. ಕೆರಳಿದ ಕೇಸರಿಯಂತೆ ಬೇಲಿಫನ ಕಡೆಗೆ ತಿರುಗಿದೆನು. ಅವನಿಗೂ ಸಂದೇಹವಾಯಿತು. ನನ್ನ ಹೆಸರು, ಕುಲ, ಗೋತ್ರ ಎಲ್ಲವನ್ನೂ ವಿಚಾರಿಸಿದನು ಕೆಲಸವು ಮಿಂಚಿತೆಂದು ಹೇಳಿ ಕ್ಷಮೆಯನ್ನು ಬೇಡಿದನು. ಅದರಲ್ಲಿಯೂ ಇಂಗ್ಲೀಷಿನಲ್ಲಿ ಕ್ಷಮೆ ಬೇಡುವುದು ಬಹು ಸುಲಭ. ಎಂತಹ ಅಕ್ಷಮ್ಯ ಅಪರಾಧ ಮಾಡಿದ್ದರೂ "Sorry excuse me" ಎಂತ ಹೇಳಿದರೆ ಸಾಕು. ಬಾಯಿಗೆ ಬೀಗ ಹಾಕಿಕೊಳ್ಳಬೇಕಾಗುತ್ತೆ. ಅವನೂ ಹಾಗೆಯೇ ಹೇಳಿ ನನ್ನ ಕೋಪಾನಲವು ಭುಗಿಲೆಂದು ಹತ್ತುವುದರಲ್ಲಿಯೇ ಮಾಯವಾದನು.

ಎದ್ದ ಗಳಿಗೆಯನ್ನು ಶಪಿಸುತ್ತಾ ಮನೆಗೆ ಬಾಗಿದೆ. "ಕಾಫೀನಾರೆ ತೊಗೊಂಡು ಬಾ" ಎಂತ ಹೆಂಡತಿಗೆ ಹೇಳಿದೆ.

"ಸುಡುಗಾಡು ಹಾಲಿನಾಕೆ ಇನ್ನೂ ಬಂದಿಲ್ಲ. ನೀವೇ ಹೋಗಿ ತೊಗೊಂಡು ಬರ್ರಿ. ಹಂಗೇ ಸಿಲ್ಕ್ ಸೀರಿ ಕೈಯಾಗೆ ಹಿಡಕೊಂಡು ಬರ್ರಿ."

ಹೇಗಿದೆ ? ನಾನೇ ಹೋಗಿ ಹಾಲು ತಂದೆ. ಕಾಫಿಯ ಪ್ರಕರಣವು ಸಮಾಪ್ತಿಯಾಯಿತು.

ಕಾಯಿ ಪಲ್ಯ ತರಲು ಪೇಟೆಗೆ ಹೋದೆ. ನನ್ನ ಹಳೆಯ ಮಿತ್ರ (ಕರ್ನಾಟಕದಲ್ಲಿ ದುಡಿಯಲಾಗದೆ ಮುಂಬೈಯಲ್ಲಿ ೫೫ ರೂಪಾಯಿ ಸಂಬಳ ತೆಗೆದುಕೊಳ್ಳುತ್ತಾನೆ) ಮೂರ್ತಿಯು ಸಿಕ್ಕನು. ಅವನೊಂದಿಗೆ ಹಾಗೆಯೇ ಹೊರಟೆ, ಕಾಯಿಪಲ್ಯ ತೆಗೆದುಕೊಳ್ಳುವುದು ಮರೆತುಹೋಯಿತು. ಅವನ ಮನೆಯಲ್ಲಿ ಕಾಫಿಯಾಯಿತು. ಭವ್ಯ ಮುಂಬೈ ನಗರದ ವರ್ಣನೆಯನ್ನು ಅವ್ಯಾಹತವಾಗಿ ನಡೆಯಿಸಿದ್ದ. ಹಿಂದಿನ ರಾತ್ರಿ ನಿದ್ರೆಯಿಲ್ಲದೆ, ಮೂರ್ತಿಯ ಉಪನ್ಯಾಸವು ಸ್ವಾತಿ ಮಳೆಯ ಹಾಗೆ ಜಡಿ ಮಳೆಯಾದ್ದರಿಂದ ಬಹು ಬೇಸರವೆನಿಸಿತು. ಅವನಿಂದ ಬಿಡುಗಡೆ ಹೊಂದಿಬರುವುದೇ ದುಸ್ತರ ವಾಯಿತು. ಸುಮಾರು ೧೨ ಗಂಟೆಯಾಗಿರಬಹುದು. ಎಷ್ಟಾದರೂ ಆಗಲಿ ಅವನಿಂದ ಪಾರಾದೆನೆನ್ನುವ ಸಂತೋಷವಾಯಿತು.

ಮನೆಗೆ ಬರುತ್ತಲೇ ನನ್ನ ಹಿರಿಯ ಮಗ ಶೀನನು (ಅವನೊಬ್ಬ under graduate-IV Form ನಲ್ಲಿ ಓದುತ್ತಾನೆ) ಒಂದು ಚೀಟಿ ಯನ್ನು ಕೊಟ್ಟು 'ಅಪ್ಪಾ ನಾನು ರಜಕ್ಕೆ ಬರೆದುಕೊಂಡಿದೇನೆ ಶಾಲೆಗೆ' ಇದು ಸರಿಯಾಗಿದೆಯೇ ?' ಎಂತ ಹೇಳಿದ. ನನ್ನ ಹೆಂಡತಿ ಬಹಿಷ್ಟೆ ಯಾದಕ್ಕೆ ೩ ದಿನಗಳ ರಜಾ ಬರೆದುಕೊಂಡಿದ್ದ !

ಹಠಾತ್ತಾಗಿ ನೆಲ ಕುಸಿದರೂ ಆಕಾಶ ಕಳಚಿದರೂ ನನಗೆ ಇಷ್ಟು ದಿಗ್ಭ್ರಮೆಯಾಗುತ್ತಿರಲಿಲ್ಲ. ೧೨ ಗಂಟೆಯಾಗಿದೆ; ಇನ್ನು ಮೇಲೆ C.M.G. ಆಗಬೇಕು (Cook master general) ಅಡಿಗೆಗೆ ಒಲೆ ಹೊತ್ತಿಸಬೇಕು. ಶೀನನು ಅಡಿಗೆಯನ್ನು ಬಿಟ್ಟು ಎಲ್ಲವನ್ನೂ ಮಾಡು ತ್ತಾನೆ. ಒಳಗೆ ಹೋದೊಡನೆಯೇ ಅಶರೀರ ವಾಕ್ಕು ಕೇಳಿ ಬಂತು. 'ನೀವೇನು ಪಟ್ಟಾಗಿ ಹೋಟ್ಲಾಗೆ ತಿಂದಿರ್ತೀರಿ. ಮನ್ಯಾಗ ಇದ್ದವರೆ ಸಾಯೋರು !' ಇದು ನನ್ನ ಹೆಂಡತಿಯ ಧ್ವನಿ. ಅಟ್ಟದ ಮೆಟ್ಟಿಲ ಮೂಲೆ ಯಲ್ಲಿ ಅವಳಿಗೆ ಈಗ ಸ್ಥಳ. ಅಡಿಗೆಯಮನೆಗೂ ಅಟ್ಟದ ಮೂಲೆಗೂ ದೂರವಾಗುವುದೆಂದು ಅವಳು ಸ್ವಲ್ಪ ದೊಡ್ಡ ದನಿಯಿಂದಲೇ ಮಾತ ನಾಡುತ್ತಾಳೆ. ಇದಕ್ಕೆ ನಾನೇನೂ ಉತ್ತರ ಕೊಡಲಿಲ್ಲ.

ಒಂದು ಸಾರಿ ನನ್ನ ಮಿತ್ರರೊಬ್ಬರು ಕೇಳಿದರು. 'ಏನ್ರಿ, ನಿಮ್ಮಲ್ಲಿ ರೇಡಿಯೋ ಆದೇನು ?'

'ಹುಂ, ಅದು ನಮ್ಮ ಮಾವನವರು ಕೊಟ್ಟದ್ದು' ಎಂತ ಹೇಳಿದೆ.

ಮಗ್ಗುಲ ಮನೆಯ ವಿಮಲಾಬಾಯಿಯು, "ಈ ಪ್ರಾಣಿ ಉಪವಾಸ ಸಾಯುತ್ತದೆ" ಎಂತ ಹೇಳಿ ನನ್ನ ಹೆಂಡತಿಗೆ ಮೊಸರು ಅವಲಕ್ಕಿ ಹಾಕಿದ್ದರಂತೆ. ಅದನ್ನು ಅವಳು ಹೊಡೆದು ಗೊರಕೆ ಹೊಡೆಯುತ್ತಾ ಮಲಗಿದ್ದಳು. ಮಧ್ಯಾಹ್ನದ ಊಟವು ೩ ಗಂಟೆಗೆ ಮುಗಿಯಿತು; ಮತ್ತು ೪|| ಗಂಟೆಗೆ ಕಾಫಿ ತೀರಿತು.

ಹವಾಯಾತ್ರೆಗೆ ಹೊರಟೆ, "ನೀವು ಇವತ್ತು ರಾತ್ರಿ ಸಿನಿಮಾಕ್ಕೆ ಹೋಗಿ ಕೂತುಕೋಬ್ಯಾಡ್ರಿ. ಪ್ಯಾಟ್ಯಾಗ ಹೋಗ್ತಿರೇನೋ ? ಹಂಗಾರೆ ಸಿಲ್ಕ್‌ಸೀರೆ ಕೈಯಾಗ ಹಿಡಕೊಂಡು ಬರ್ರಿ!" ಮಗ ಶೀನ ಬರೆದ ಹಾಗೆ ನಾನೂ ರಜಕ್ಕೆ ಬರೆದುಕೊಂಡೆ ಮೂರು ದಿವಸಗಳಿಗೆ. ಪೇಟೆಯಲ್ಲಿ ಒಂದು ಗ್ರಾಮಫೋನ್ ರಿಕಾರ್ಡ್ ನನ್ನನ್ನು ಆಕರ್ಷಿಸಿತು. ನನ್ನ ಭಾವನೆಯ ತಂತುವನ್ನು ಮೀಟಿತು. ಅದನ್ನು ಕೊಂಡುಕೊಂಡೆ. ಮನೆಗೆ ಬಂದವನೆ ಆ ರಿಕಾರ್ಡು ಹಾಕಿದೆ.

"ಹೆಂಡತಿ, ಪ್ರಾಣ ಹಿಂಡುತಿ !"

ಸಾಕು ಈ ಭಾನುವಾರ.

# ವೈದ್ಯರು

**Doctors are luckier than architects, they can bury their failures.**

**—Sri Edwin Luttens.**

ನಿಜ, ಶಿಲ್ಪಿ ಮಾಡಿದ ಕೆಲಸದಲ್ಲಿ ನ್ಯೂನತೆ ಇದ್ದರೂ ಸಹ ಜನ ಜಂಗುಳಿ ಅದನ್ನು ನೋಡುತ್ತದೆ. ಅದರ ತಪ್ಪುಗಳನ್ನು ಬಾಯಿ ನೋಲುವ ವರೆಗೆ ಆಡಿಕೊಳ್ಳುತ್ತದೆ. ಆದರೆ, ಅದೇ ಒಬ್ಬ ವೈದ್ಯನಿಂದ ಔಷಧಿ ತೆಗೆದು ಕೊಂಡು ಸತ್ತುಹೋದವನು ಆ ಬಗ್ಗೆ ದೂರಲು ಸಾಧ್ಯವೇ ಇಲ್ಲ. ಒಂದು ಸಾರಿ ಒಬ್ಬ ಡಾಕ್ಟರು ತಮ್ಮಲ್ಲಿ ಬರುವ ಗಿರಾಕಿಗಳ ತಂಡವನ್ನು ನೋಡಿ ಬೇಸತ್ತು "ನನ್ನಲ್ಲಿ ಔಷಧಿ ತೆಗೆದುಕೊಂಡವರಲ್ಲಿ ಎಷ್ಟೋ ಜನ ದಿನವೂ ಸಾಯುತ್ತಾರೆ. ಇಷ್ಟಾದರೂ ನನ್ನ ಆಸ್ಪತ್ರೆಗೆ ಗಿರಾಕಿಗಳು ಬಂದು ತುಂಬುತ್ತಾರಲ್ಲ, ಇದೇ ನನಗೆ ಆಶ್ಚರ್ಯ !" ಎಂತ ಹೇಳಿದರು.

ಮಕ್ಕಳಂತೂ ಡಾಕ್ಟರ ಹೆಸರು ಹೇಳಿದರೆ ಗುಮ್ಮ ಗೊಗ್ಗಯ್ಯನ ಹೆಸರು ಕೇಳಿದಂತೆ ರಾತ್ರಿ ಹೊತ್ತು ಚೀರಿಕೊಳ್ಳುತ್ತವೆ ನಾವು ಸಿನಿಮಾಕ್ಕೋ, ಹೋಟಲಿಗೋ ಹೋಗಬೇಕಾಗಿದೆಯೆಂದುಕೊಳ್ಳೋಣ. ನಾವು ಯಾವ ಉದಾಹರಣೆಯನ್ನೂ ಕೊಡದೆ ಆಸ್ಪತ್ರೆಗೆ ಹೊರಟಿದ್ದೇ ವೆಂದು ಹೇಳಿದರೆ ಮನೆಯ ಮಕ್ಕಳಲ್ಲಿ ಒಂದೂ ನಮ್ಮ ಬೆನ್ನುಬೀಳುವುದಿಲ್ಲ.

ನನ್ನ ವೈದ್ಯಮಿತ್ರರೊಂದುಸಾರಿ ಯಾವನೋ ಕಾಯಿಲೆಯಾದವನ ಮನೆಗೆ ಹೋಗಬೇಕಾಗಿತ್ತು. ಬೆಳಿಗ್ಗೆ ಎಂಟರ ಸುಮಾರಿಗೆ ಆತನಿಗೆ ತೀರಾ

ಹೆಚ್ಚಾಗಿದೆಯೆಂದೂ, ವೈದ್ಯರು ಬರಬೇಕೆಂದೂ ಬುಲಾವ್ ಬಂದಿತ್ತು. ದಾರಿಯಲ್ಲಿ ನಾನು ಸಿಕ್ಕಿದೆ. ಎಲ್ಲ ವೈದ್ಯರಂತೆ ಅವರೂ ಸವಿಮಾತುಗಾರರು ಮಾತಿನ ಚಾಳಿ ವಿಪರೀತ ಬೆಳೆಯಿತು. ಹನ್ನೆರಡು ಗಂಟೆಯ ಸುಮಾರಿಗೆ ಬಂದಿತು. "ಅಯ್ಯೋ ಬಹಳ ಹೊತ್ತಾಯಿತು. ನಾನು ಹೊರಡಬೇಕು" ಎಂದು ಹೇಳುತ್ತ ಹೊರಟವರು ಮತ್ತೆ ಒಂದು ಗಳಿಗೆ ನಿಂತು "ಸ್ಟೆತ್‌ಸ್ಕೋಪ್ ತೆಗೆದುಕೊಂಡು ಹೋಗಲೋ ಅಥವಾ ದಿಂಬುಗಳ ತೆಗೆದುಕೊಂಡು ಹೋಗಲೋ ಎಂತ ಅನುಮಾನಿಸುತ್ತಿದ್ದೆ. ಆತನಿಗೆ ಹೆಚ್ಚಾಗಿದೆ ಅಂತ ಎಂಟು ಗಂಟೆಗೆ ಸುದ್ದಿ ಬಂದಿತ್ತು" ಅಂತ ಹೇಳಿದರು.

ವೈದ್ಯರಿಂದ ಅನುಕೂಲವಾಗುವುದೂ ಉಂಟು. ಮೊನ್ನೆ ಒಬ್ಬ ಒಂದೇ ಏಟಿಗೆ ಇಪ್ಪತ್ತುಸಾವಿರ ರೂಪಾಯಿ ಸಂಪಾದಿಸಿದ. ಆತ ತನ್ನ ಕೃತಜ್ಞತೆಯನ್ನರ್ಪಿಸಲು ಆ ವೈದ್ಯರಲ್ಲಿಗೆ ಬಂದ. "ಸ್ವಾಮೀ, ನನ್ನ ಚಿಕ್ಕಪ್ಪನಿಗೆ ಎಷ್ಟೋ ಜನ ವೈದ್ಯರಿಂದ ಔಷಧಿ ಕೊಡಿಸಿದೆ. ಯಾರಿಂದಲೂ ಅನುಕೂಲವಾಗಲಿಲ್ಲ. ಅದೇ ತಮ್ಮ ಔಷಧಿ ತೆಗೆದುಕೊಂಡಿದ್ದರಿಂದ ಮೊನ್ನೆ ಸತ್ತುಹೋದ. ಆತನಿಗೆ ಬೇರೆ ಯಾರೂ ವಾರಸುದಾರರು ಇಲ್ಲದ್ದರಿಂದ ಅವನ ಇಪ್ಪತ್ತುಸಾವಿರ ರೂಪಾಯಿ ಆಸ್ತಿ ನನಗೇ ಸೇರಿತು ನಿಮ್ಮ ಉಪಕಾರ ಮರೆಯಲಾರೆ" ಎಂದು ಹೇಳಿದ.

ಮುಂಜಾಗ್ರತೆ ಕಾರ್ಯಕ್ರಮದಲ್ಲಿ ವೈದ್ಯರು ಬಹಳ ಗಟ್ಟಿಗರು. "ಉಪಾಧ್ಯಾಯಾಶ್ಚ, ವೈದ್ಯಾಶ್ಚ ಕಾರ್ಯಾಂತೇ ಅಪ್ರಯೋಜಕಾಃ" ಎಂಬ ಸುಭಾಷಿತದ ಅನುಭವ ಅವರಿಗೆ ಚೆನ್ನಾಗಿ ಗೊತ್ತು. ಅಕಸ್ಮಾತ್ತಾಗಿ ಗುಣಹೊಂದಿದ ರೋಗಿಯೊಬ್ಬನು ತನ್ನ ವೈದ್ಯನ ಬಳಿಗೆ ಹೋಗಿ "ಸ್ವಾಮೀ, ನಿಮ್ಮ ಉಪಕಾರವನ್ನು ನಾನು ಈ ಜನ್ಮದಲ್ಲಿ ತೀರಿಸಲು ಸಾಧ್ಯವೇ ಇಲ್ಲ" ಎಂತ ಹೇಳಿದ. ಅದಕ್ಕೆ ವೈದ್ಯರು "ತೀರಿಸದೆ ಏನು, ಚೆಕ್ ಮೂಲಕ ಅಥವಾ ನಗದು ಹಣ ಕೊಡಿ" ಅಂತ ಕೇಳಿದರು.

o o o

ಕೆಲವು ವೈದ್ಯರು ತಾವು ಕೊಟ್ಟ ಔಷಧಿಗಿಂತ ಬಹಳ ತೂಕವಾದ

ಬಿಲ್ ಕಳಿಸಿದ್ದರು. ರೋಗಿ ಅದನ್ನು ನೋಡಿ ವೈದ್ಯರಿಗೆ ಒಂದು ಕಾಗದ ಬರೆದು "ನಿಮ್ಮ ಬಿಲ್ ನೋಡಿ ನನ್ನ ರಕ್ತವೆಲ್ಲಾ ಕುದಿಯುತ್ತಿದೆ" ಎಂದು ತಿಳಿಸಿದ. ಕೂಡಲೇ ವೈದ್ಯರು ಉತ್ತರಕೊಡುತ್ತ "ರಕ್ತದ ಕುದಿತ ನಿಲ್ಲಿಸಲು ಇನ್ನೂ ಐವತ್ತು ರೂಪಾಯಿ ಹೆಚ್ಚಿಗೆ ಕೊಡಬೇಕು" ಎಂದರು.

ಔಷಧಿಗಿಂತ ಪಥ್ಯವೇ ಬಹು ಮುಖ್ಯವೆಂದು ಕೆಲವು ವೈದ್ಯರ ಹಟ. ಒಬ್ಬನಿಗೆ ಬಹಳ ನಿತ್ರಾಣವಾಗಿತ್ತು. ಅವನು ಕೇವಲ ಮಕ್ಕಳು ತೆಗೆದು ಕೊಳ್ಳುವ ಆಹಾರವನ್ನು ತೆಗೆದುಕೊಳ್ಳಬೇಕೆಂದು ವೈದ್ಯರ ಕಟ್ಟಪ್ಪಣೆ ಯಾಗಿತ್ತು. ಆದರೆ ಮೂರನೇ ದಿನ ಅವನ ದೇಹಸ್ಥಿತಿ ತುಂಬಾ ಹದ ಗೆಟ್ಟಿತ್ತು. ಹಿಂದಿನ ದಿನ ಏನೇನು ಆಹಾರವನ್ನು ತೆಗೆದುಕೊಂಡ ನೆಂಬುದನ್ನು ವಿಚಾರಿಸಿದರು. ರೋಗಿ ಹೇಳಿದ: "ಕೇವಲ ಮಕ್ಕಳು ತೆಗೆದುಕೊಳ್ಳುವ ಆಹಾರವನ್ನೇ ತೆಗೆದುಕೊಂಡೆ ಸ್ವಾಮಿ. ಒಂದು ಲೋಟಾ ಹಾಲು, ಕಿತ್ತಳೆ ಹಣ್ಣಿನ ಸಿಪ್ಪೆ, ಒಂದು ಹಿಡಿ ಮಣ್ಣು"

ವೈದ್ಯ ಹೇಳುವುದೊಂದು, ರೋಗಿ ತೆಗೆದುಕೊಳ್ಳುವುದೊಂದು ಆಗಿ ಅನರ್ಥಗಳು ಸಂಭವಿಸುವುದು ಸ್ವಾಭಾವಿಕ. ಅದೇ ವೈದ್ಯರು ಇನ್ನೊಬ್ಬ ರೋಗಿಗೆ "ಅರ್ಧ ಬ್ರೆಡ್, ಒಂದು ಗ್ಲಾಸ್ ಹಾಲು, ಒಂದು ಮೋಸಂಬಿ ಹಣ್ಣು" ತೆಗೆದುಕೊಳ್ಳಬೇಕೆಂದು ತಿಳಿಸಿದರು. "ಇದನ್ನು ಊಟಕ್ಕೆ ಮುಂಚೆ ತೆಗೆದುಕೊಳ್ಳಬೇಕೋ, ಅಥವಾ ಊಟವಾದ ಮೇಲೆ ತೆಗೆದು ಕೊಳ್ಳಬೇಕೋ ?" ಎಂದು ಕೇಳಿಯೇಬಿಟ್ಟ.

ಮಗುವೊಂದಕ್ಕೆ ಕಾಯಿಲೆಯಾಗಿತ್ತು. ಅದಕ್ಕೆ ಔಷಧಿ ತೆಗೆದು ಕೊಂಡು ಹೋಗಲು ಅದರ ತಂದೆ ಬಂದಿದ್ದ. "ಔಷಧ ಕೊಡುವಾಗ ಚೆನ್ನಾಗಿ ಅಲುಗಿಸಿ ಕೊಡಬೇಕು" ಅಂತ ವೈದ್ಯರು ಹೇಳಿದ್ದರು. ಔಷಧ ವನ್ನು ಕೊಡುವಾಗ ತಂದೆ ಮಗುವನ್ನು ರಭಸದಿಂದ ಇತ್ತಿಂದ ಅತ್ತ, ಅತ್ತಿಂದ ಇತ್ತ ಅಲುಗಾಡಿಸಿದ.

ವೈದ್ಯರು ಪಥ್ಯದ ಕ್ರಮವನ್ನು ಸರಿಯಾಗಿ ವಿವರಿಸದಿದ್ದರೆ ಎಂತಹ ಅನರ್ಥ ಸಂಭವಿಸುವುದೆಂದು ಈ ಪುಟ್ಟ ಪ್ರಸಂಗದಿಂದ ನಿದರ್ಶನವಾಗುತ್ತೆ.

ಒಬ್ಬ ಹಳ್ಳಿಯ ಧಾಂಡಿಗ ಅವನಿಗೆ ಅಜೀರ್ಣ ಉಂಟಾಗಿ ಹೊಟ್ಟೆ ಪಿಟ್ಟೆ ಕಾಯಿಯ ಹಾಗೆ ಊದಿಕೊಂಡಿತು. ಊರಿನವರು ಹೇಳಿದ ಔಷಧಿಕ್ರಮ ಗಳನ್ನೆಲ್ಲಾ ಮಾಡಿದ ಕೈ ಮಿಂಚಿದಮೇಲೆ ತಾನೇ ಎಲ್ಲರೂ ಆಸ್ಪತ್ರೆಗೆ ಹೋಗುವುದು ? ಅದರಂತೆ ಅವನೂ ಡಾಕ್ಟರ ಬಳಿ ಬಂದ. ಡಾಕ್ಟರು ಪರೀಕ್ಷೆ ಮಾಡಿ ಔಷಧ ಕೊಟ್ಟು ಬರೀ ಹಣ್ಣಿನ ಪಥ್ಯದ ಮೇಲೆ ಇರ ಬೇಕೆಂದೂ ಮತ್ತೆ ನಾಳೆ ಬರಬೇಕೆಂದೂ ತಿಳಿಸಿದರು.

ಮಾರನೆಯ ದಿನ ರೋಗಿಯ ಸ್ಥಿತಿ ಅಸ್ತಾವ್ಯಸ್ತವಾಗಿದ್ದಿತು. ಡಾಕ್ಟರಿಗೆ ದಿಗ್‌ಭ್ರಮೆ ಹಿಡಿಯಿತು. ತಾವು ಕೊಟ್ಟ ಔಷಧಿ ಮತ್ತು ಅನುಪಾನದಿಂದ ರೋಗಿಗೆ ಎಷ್ಟೋ ಭಾಗ ಗುಣವಾಗಬೇಕಿತ್ತು. ಆದರೆ ಅದಕ್ಕೆ ಬದಲು ತೀರಾ ಹೆಚ್ಚಾದುದನ್ನು ನೋಡಿ ಅವರು ಹುಚ್ಚನಂತಾದರು. "ಹಣ್ಣು ತೆಗೆದುಕೊಳ್ಳದೆ ಮತ್ತೇನನ್ನೂ ತೆಗೆದುಕೊಂಡಿಲ್ಲ ತಾನೇ ?" ಅಂತ ಮತ್ತೆ ಮತ್ತೆ ವಿಚಾರಿಸಿದರು. "ನೀವು ಹೇಳಿದ ಹಾಗೆ ಬರೀ ಹಣ್ಣಿನ ಪಥ್ಯದ ಮೇಲೆ ಇದ್ದೇನೆ ಸ್ವಾಮಿ" ಎಂದು ಹೇಳಿದ. ಏನೂ ತೋಚ ಲಿಲ್ಲ. "ನೀನು ಯಾವ ಹಣ್ಣು ತಿಂದೆ ? ಎಷ್ಟು ತಿಂದೆ ? ವಿವರಿಸು ಮಂಥವನಾಗಯ್ಯಾ ?" ಅಂತ ಕೇಳಿದರು.

"ಸ್ವಾಮೀ, ನೀವು ಹೇಳಿದಂತೆ ಹಣ್ಣಿನ ಪಥ್ಯವನ್ನೇ ಮಾಡಬೇ ಕೆಂದು ಹಣ್ಣಿಗಾಗಿ ಹುಡುಕಾಡಿದೆ. ನಮ್ಮ ಹಿತ್ತಲಲ್ಲಿ ಒಂದು ದೊಡ್ಡ ಕುಂಬಳ ಹಣ್ಣು ಇತ್ತು. ಅದಕ್ಕೆ ಒಂದು ಸೇರು ಬೆಲ್ಲ, ಒಂದು ಸೇರು ಹಾಲು ಎಲ್ಲವನ್ನೂ ಕಲಸಿ ತಿಂದೆ" ಅಂತ ನಿಧಾನವಾಗಿ ಹೇಳಿದ.

ಈ ಡಾಕ್ಟರುಗಳಲ್ಲಿ ಇನ್ನೊಂದು ಗೋಳು ಏನೆಂದರೆ ಒಂದೊಂದು ರೋಗಕ್ಕೆ ಒಬ್ಬೊಬ್ಬ ಡಾಕ್ಟರು. ಹಲ್ಲು, ಕಣ್ಣು, ಕಿವಿ, ಹೊಟ್ಟೆ ಹೀಗೆ. ಒಬ್ಬನಿಗೆ ಮೂಗಿನೊಳಗೆ ಒಂದು ಹುಣ್ಣಾಯಿತು. ಅವನಿಗೆ ಅನುಮಾನ ಬಂತು. ಈ ಸ್ಪೆಷಲಿಸ್ಟ್ ಗಲಾಟೆ ಅವನಿಗೆ ದಿಗಿಲುಪಡಿಸಿತು. ಮೂಗಿನ ಎಡಸೊಳ್ಳೆಗೆ ಒಬ್ಬ ಸ್ಪೆಷಲಿಸ್ಟ್, ಬಲಸೊಳ್ಳೆಗೆ ಒಬ್ಬ ಸ್ಪೆಷಲಿಸ್ಟ್ ಇರ ಬೇಕೆಂದು ತರ್ಕಿಸಿದ.

# ವೈದ್ಯರು

ಕೆಲವು ಡಾಕ್ಟರುಗಳು ಮಾತೆತ್ತಿದರೆ ಆಪರೇಷನ್ ಅನ್ನುತ್ತಾರೆ. ಮತ್ತೆ ಕೆಲವರು ಇಂಜಕ್ಷನ್ ಅನ್ನುತ್ತಾರೆ. ಉಳಿದವರು ಯಾವ ತೊಂದರೆಯನ್ನೂ ತೆಗೆದುಕೊಳ್ಳದೆ ಅಂಗಡಿಗಳಲ್ಲಿ ಸಿಕ್ಕುವ ಔಷಧಿಗಳಿಗೆ ಚೀಟಿಗಳನ್ನು ಬರೆದು ಕೊಡುತ್ತಾರೆ. ಇನ್ನೂ ಕೆಲವು ಡಾಕ್ಟರುಗಳಿದ್ದಾರೆ: "ಹೋಗ್ರಿ ಬರೀ ನೀರುಮಜ್ಜಿಗೆ ತೆಗೆದುಕೊಳ್ಳಿ" ಅನ್ನುತ್ತಾರೆ. ಹೀಗೆ ನಿಂಬೆಹಣ್ಣಿನ ಡಾಕ್ಟರುಗಳೂ ಇದ್ದಾರೆ.

o o o

ಚೀನಾದಲ್ಲಿ ಹೆಂಗಸರಿಗೆ ಕಾಯಿಲೆಯಾದರೆ ಬಹು ತಾಪತ್ರಯ. ವೈದ್ಯ ಬಂದಾಗ ತಮ್ಮ ವ್ಯಾಧಿ ಏನೆಂಬುದನ್ನು, ತಮಗೆ ನೋವು ಬಾಧೆ ಎಲ್ಲಿ ಆಗುತ್ತದೆಂಬುದನ್ನು ಅವರು ತೋರಿಸುವ ರೀತಿ ಬಹು ವಿಚಿತ್ರ. ಕಾಯಿಲೆಯಾದವಳು ಒಂದು ಬೊಂಬೆಯನ್ನು ತನ್ನ ಬಳಿ ಇಟ್ಟುಕೊಂಡಿರುತ್ತಾಳೆ. ವೈದ್ಯ ಬಂದಾಗ ತನಗೆ ಏನಾಗಿದೆ ಎಂಬುದನ್ನು ಅಂದರೆ ತನಗೆ ದೇಹದ ಯಾವ ಅಂಗದಲ್ಲಿ ನೋವು ಬಾಧೆಗಳಿವೆಯೆಂಬುದನ್ನು, ಬೊಂಬೆಯ ಆಯಾ ಅಂಗಗಳ ಭಾಗಗಳನ್ನು ಮುಟ್ಟಿ ತೋರಿಸುತಾಳೆ. ಚೂಟಿ ವೈದ್ಯ ವ್ಯಾಧಿಯನ್ನು ಅರ್ಥಮಾಡಿಕೊಂಡು ಔಷಧಿ ಕೊಡುತ್ತಾನೆ.

ಜಪಾನಿನ ಔಷಧಿ ಕ್ರಮವೇ ಬೇರೆ. ಜಿರಲೆ, ಕಪ್ಪೆ, ಏಡಿ, ಜಿಂಕೆಯ ಕಾಲು ಮತ್ತು ಪ್ರಾಣಿಗಳ ಅಂಗಾಂಗಗಳನ್ನು ಆಯಾ ಕಾಯಿಲೆಗನುಸಾರವಾಗಿ ಔಷಧಿ ಕೊಡುತ್ತಾರೆ.

ವೈದ್ಯರ ಸಹವಾಸವೆಂದರೆ ಜೀವನ್ಮರಣ ಹೋರಾಟ ಇದ್ದಂತೆ. ಭೂಭಾರ ಹೆಚ್ಚಾಗಿದೆ. ಅವರಿಲ್ಲದಿದ್ದರೆ ನಮ್ಮ ಗತಿ ಏನಾಗುತ್ತಿತ್ತೋ ?

# ಪತ್ರ ಪ್ರೇಮ

ಆಧುನಿಕ ಕವಿಗಳಲ್ಲಿ ನಾನೊಬ್ಬ. ನಾನು ಬರೆದ ಗೋಳು ಗೀತೆಗಳ ಪುಸ್ತಕವೊಂದು ಮೊನ್ನೆ ತಾನೆ ಹೊರಬಿದ್ದಿದೆ. "ಸಂತೆಯಲ್ಲಿ ತಪ್ಪಿಸಿಕೊಂಡ ಮಗು" "ಲಾರಿಯ ಕೆಳಗೆ ಸಿಕ್ಕ ನಾಯಿಯ ಕುನ್ನಿ" ಇವು ಆ ಕವಿತಾ ಸಂಗ್ರಹದಲ್ಲಿ ಪ್ರಮುಖವಾದವು. ನನ್ನ ಚತುಷ್ಪಾದಿಗಳು ಮನರಂಜಕ ವಾಗಿವೆಯೆಂದು ಅನೇಕ ಜನ ಮಾಸಿಕಗಳ ಸಂಪಾದಕರು ಅಭಿಪ್ರಾಯ ಪಟ್ಟಿದ್ದಾರೆ. ಎಷ್ಟೇ ಆಗಲಿ ನನ್ನದು ಕವಿಯ ಮನಸ್ಸು ಕಲ್ಪನೆಯ ಹಕ್ಕಿಯನ್ನು ಹಾರಿಬಿಟ್ಟೆನೆಂದರೆ ತೀರಿತು—ಆ ಹಕ್ಕಿ ವಾಪಸ್ಸು ಬರುವ ಮಾತೇ ಇಲ್ಲ. ನನ್ನ ಮಿತ್ರರು, ಮೆಚ್ಚುಗರು ನನ್ನ ಬಗ್ಗೆ ಯಾವಾಗಲೂ ಸಂಶಯವಿಟ್ಟುಕೊಂಡಿದ್ದಾರೆ ನಾಗರಿಕರ ಮಧ್ಯೆ ನಾನು ನಿರಾಂತಕವಾಗಿ ಓಡಾಡುವುದು ಸರಿಯೆ, ಹುಚ್ಚರಾಸ್ಪತ್ರೆ ನನ್ನ ನಿಜವಾದ ನಿವಾಸಸ್ಥಾನ ವಲ್ಲವೇ ? ಎಂದು ಕೇಳಿದ್ದಾರೆ. ಅಬ್ಬಾ ಅವರದು ಎಂತಹ ದಾಷ್ಟಿಕ ! ಕವಿಯ ಬಗ್ಗೆ ಅಂತಹ ಮಾತುಗಳನ್ನು ಆಡಬಹುದೇ ? ಓಡುವ ಲೋಕಕ್ಕೂ ನಮಗೂ ಬಹಳ ವ್ಯತ್ಯಾಸವಿರಬಹುದು, ನಮ್ಮ ನಡೆ ನುಡಿ ಕೊಂಚ ವಿಚಿತ್ರವಾಗಿಯೂ ಇರಬಹುದು. ಅದಮಾತ್ರಕ್ಕೆ ನಮಗೆ ವಿಹಾರ ಸ್ಥಾನ ಹುಚ್ಚರಾಸ್ಪತ್ರೆಯಾದೀತೇ ? ಹಾಗೆ ನೋಡಿದರೆ ಇಡೀ ಪ್ರಪಂಚವೇ ಒಂದು ಹುಚ್ಚರಾಸ್ಪತ್ರೆ, ಒಬ್ಬರ ವರ್ತನೆ ಇನ್ನೊಬ್ಬರಿಗೆ ವ್ಯತ್ಯಾಸವಾಗಿ ಕಾಣಿಸುತ್ತದೆ.; ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಒಬ್ಬನ ದೃಷ್ಟಿಯಲ್ಲಿ ಇನ್ನೊಬ್ಬ ಹುಚ್ಚ. ಹಾಗಿದ್ದ ಮೇಲೆ ನನ್ನೇಕೆ ಜನ ಆಡಿ ಕೊಳ್ಳಬೇಕು ?

ಈ ಜನರ ಸಹವಾಸದಿಂದ ಸುಸ್ತಾಗಿ ಸಮ್ಮತ ಹೊಡೆದೆ. ಬೇರೆ

# ಪತ್ರ ಪ್ರೇಮ

ಪ್ರಾಂತದ, ಬೇರೆ ಜನರ ಸಂಪರ್ಕ ಬೆಳೆಸಲು ಆಶೆ ಅಂಕುರಿಸಿತು. ವಾಡಿಕೆಯಂತೆ "ಬೇಕಾಗಿದ್ದಾರೆ" ಜಾಹಿರಾತನ್ನು ಒಂದು ಪತ್ರಿಕೆಯಲ್ಲಿ ಓದುತ್ತಿದ್ದಾಗ — ಹುಡುಕುವುದನ್ನು ಎಡವಿದಂತೆ—ನನಗೆ ಪ್ರಿಯವಾದ ವಿಷಯವೊಂದು ಕಣ್ಣಿಗೆ ಬಿತ್ತು. ದೂರ ದೇಶದಲ್ಲಿರುವವರು ಮಹನೀಯರು ಮಹಿಳೆಯರೊಂದಿಗೆ ಪತ್ರಮುಖೇನ ಸ್ನೇಹ ಬೆಳೆಸಿಕೊಡುವುದಾಗಿ ಒಂದು ಸಂಸ್ಥೆಯು ಜಾಹಿರಾತು ಪ್ರಕಟಿಸಿತ್ತು. ನನ್ನ ಅಭಿರುಚಿ, ಮನೋಕಾಂಕ್ಷೆ ಮುಂತಾದ ವಿವರಗಳನ್ನು ಕೊಟ್ಟು ಆ ಸಂಸ್ಥೆಗೆ ಪತ್ರ ಬರೆದೆ. ಒಂದು ವಾರ ಕಳೆಯುವುದರೊಳಗೆ ಬೊಂಬಾಯಿಂದ ( ಆ ಸಂಸ್ಥೆಯಿರುವುದಲ್ಲಿ ) ಒಂದು ಕಾಗದ ಬಂದಿತು. ನಾನು ಕೇವಲ ಐದು ರೂಪಾಯಿಗಳ ಶುಲ್ಕ ಕಳಿಸಿದಲ್ಲಿ ನನಗೆ ಸರಿಯಾದ ಸ್ನೇಹಿತರನ್ನು ಸೂಚಿಸಿ ಕಾಗದ ಬರೆಯುವುದಾಗಿ ತಿಳಿಸಿದ್ದರು ಇಂಥ ಸದವಕಾಶವನ್ನು ಕಳೆದುಕೊಳ್ಳಬಾರದೆಂದು ನನ್ನಲ್ಲಿ ಹಣ ಇಲ್ಲದಿದ್ದರೂ, ಎಲ್ಲಿಯೋ ಸಾಲಮಾಡಿ ಕಳಿಸಿದೆ.

ಸರಿ, ಸಂಸ್ಥೆಯಿಂದ ಒಂದು ದೊಡ್ಡ ಪಟ್ಟಿಯೇ ಬಂದಿತು. ಅದರಲ್ಲಿ ಒಬ್ಬರನ್ನು ನಾನು ಸ್ನೇಹಿತರಾಗಿ ಆರಿಸಿ ಕಾಗದ ಬರೆದರೆ ಅವರು ನನಗೆ ಕಾಗದ ಬರೆಯುತ್ತಾರೆಂದೂ, ಅಂದಿನಿಂದ ನಮ್ಮ ಸ್ನೇಹ ಕುದುರಿದ ಹಾಗೇ ಎಂದು ತಿಳಿಸಿದರು. ನನ್ನ ಮನೋವೃತ್ತಿಗೆ ತಕ್ಕಂತಹವರೊಂದಿಗೆ ಸ್ನೇಹ ಬೆಳೆಸಬೇಕೆಂದು ಯೋಚಿಸಿ ಪಟ್ಟಿಯನ್ನು ಆಮೂಲಾಗ್ರವಾಗಿ, ಅತ್ಯಂತ ಸೂಕ್ಷ್ಮವಾಗಿ ನೋಡಿದೆ

ಕಲ್ಕತ್ತೆಯ ಬಿನಾದಾಸ್—ಸ್ಟ್ಯಾಂಪ್ ಕಲೆಹಾಕುವ ಹವ್ಯಾಸ ದೆಹಲಿಯ ಚಂದೂಲಾಲ್ ಹುಳುಗಳನ್ನು ಹುಡುಕುವ ಹವ್ಯಾಸ, ಹೀಗೆ ಏನೇನೋ ಇದ್ದಿತು. ಸ್ಟ್ಯಾಂಪುಗಳನ್ನಾಗಲೀ, ಹುಳುಗಳನ್ನಾಗಲೀ ಹುಡುಕುವುದು ಹುಚ್ಚುತನವೇ ವಿನಾ ಹವ್ಯಾಸವೆಂದು ಯಾರು ಹೇಳಿದರು? ಹಾಗೆ ಪಟ್ಟಿಯನ್ನು ನೋಡುತ್ತಿದ್ದಾಗ ಹಂಸಾ ದೇವಿ, ಕವಯಿತ್ರಿ ಎಂಬುದಾಗಿತ್ತು. ನನ್ನ ಸಂತೋಷದ ಕೋಡಿ

ಹರಿಯಿತು. ನನ್ನಂತೆಯೇ ಕವಿತಾದೇವಿಯ ಉಪಾಸಕರೊಬ್ಬರ ಪರಿಚಯ ಮಾಡಿಕೊಳ್ಳಬೇಕೆಂಬ ಕುತೂಹಲ ಒತ್ತಡಿಸಿತು. ಆ ಕೂಡಲೇ ಅವರಿಗೆ ಕಾಗದ ಬರೆದೆ. ನನ್ನ ಹೃದಯದ ಭಾವಗಳನ್ನು ತೋಡಿಕೊಂಡೆ. ನಾನು ಕನ್ನಡದಲ್ಲಿ ಕಟ್ಟಿದ ಕವನಗಳನ್ನು ಆಂಗ್ಲ ಭಾಷೆಗೆ ಭಾಷಾಂತರಿಸಿದೆ. ನನ್ನ ಖಾಸಗೀ ಜೀವನದ ಸ್ಥೂಲ ಪರಿಚಯವನ್ನು ಸಹ ಅವರಿಗೆ ಮಾಡಿಕೊಟ್ಟೆ.

ನನ್ನ ಕಾಗದ ಹಂಸಾದೇವಿಗೆ ಕೈ ಸೇರಿದ್ದೆ ತಡ, ಅವರಿಂದ ಉತ್ತರ ಬಂದಿತು. ಅವರ ಪತ್ರದ ಭಾರ ಹೆಚ್ಚಾಗಿದ್ದುದರಿಂದ ನಷ್ಟಪೇಷ್ ನಾಲ್ಕಾಣೆಯನ್ನು ಕೊಟ್ಟು ಅದನ್ನು ತೆಗೆದುಕೊಂಡೆ. ಮುದ್ದಾದ ಕಾಗದ, ಮುತ್ತಿನಂತಹ ಅಕ್ಷರಗಳು. ಮನಸ್ಸಿಗೆ ನೇರವಾಗಿ ತಾಗುವ ಒಕ್ಕಣಿಕೆ. ಹಂಸಾದೇವಿಯವರು ರಚಿಸಿದ ಕವಿತೆಗಳ ಆಂಗ್ಲ ಭಾಷಾಂತರವೂ ಅದರಲ್ಲಿತ್ತು. ನನ್ನ ಮತ್ತು ಅವರ ಭಾವನಾ ಲಹರಿಗಳಲ್ಲಿದ್ದ ಸಾಮರಸ್ಯವನ್ನು ನೋಡಿ ಬೆರಗಾಗಿ ಬೆಟ್ಟು ಕಚ್ಚಿದೆ. ಆ ಕಾಗದ ಕಂತೆಯಲ್ಲಿ ಹಂಸಾದೇವಿಯ ಒಂದು ಭಾವಚಿತ್ರವೂ ಇತ್ತು. ಇತ್ತೀಚೆಗೆ ತೆಗೆದ ಚಿತ್ರ ನನ್ನಲ್ಲಿ ಇಲ್ಲದಿರುವುದರಿಂದ ಕೊಂಚ ಹಳೆಯದನ್ನೇ ಕಳಿಸಿದ್ದೇನೆಂದು ಕ್ಷಮಾಯಾಚನೆ ಮಾಡಿದ್ದರು.

ನನ್ನ ಮತ್ತು ಹಂಸಾದೇವಿಯ ಪತ್ರ ವ್ಯವಹಾರ ನಿರಾತಂಕವಾಗಿ ಸಾಗಲಾರಂಭಿಸಿತು. ಅವರು ಸಹ ನನ್ನ ಕವಿತೆಗಳನ್ನು ಮೆಚ್ಚಿ ಕಾಗದ ಬರೆಯುತ್ತಿದ್ದರು. ಹೀಗಾಗಿ ವಾರದ ಏಳು ದಿನಗಳಲ್ಲೂ ಅವರ ಕಾಗದ ಇದ್ದೇ ಇರುತ್ತಿದ್ದಿತು.

ಈಗ ನನ್ನ ಮೇಜಿನ ಮೇಲೆ ಹಂಸಾದೇವಿಯ ಚಿತ್ರ ರಂಜಿಸುತ್ತದೆ. ಅದನ್ನು ನೋಡಿದಂತೆ ನನಗೆ ಸ್ಫೂರ್ತಿಯ ಚಿಲುಮೆ ಉಕ್ಕೇರಿ ಕವಿತಾವಾಹಿನಿ ತಾನೇತಾನಾಗಿ ನಿರರ್ಗಳವಾಗಿ ಹರಿಯುತ್ತದೆ. ನಾನು ಸಹ ನನ್ನ ಭಾವಚಿತ್ರವನ್ನು ಮೊನ್ನೆ ಹಂಸಾದೇವಿಗೆ ಕಳುಹಿಸಿದೆ.

## ಪತ್ರ ಪ್ರೇಮ

ಹಂಸಾದೇವಿಯು ಚೆಲುವೆಯೆಂದೇ ಹೇಳಬೇಕು. ತಿದ್ದಿದ ಮೂಗು, ಅಗಲವಾದ ಹಣೆ, ಅದಕ್ಕೆ ತಕ್ಕ ಕಣ್ಣುಗಳು, ಒಟ್ಟಿನಲ್ಲಿ ಸ್ಫುರದ್ರೂಪಿ ಯೆಂದೇ ಹೇಳಬಹುದು

ಪತ್ರಮುಖೇನ ಆರಂಭವಾದ ನಮ್ಮ ಸ್ನೇಹಲತೆಯು ಬಹು ದೀರ್ಘ ವಾಗಿ ಹಬ್ಬಿತು. ಈಚೆಗೆ ನನ್ನ ತಲೆಯಲ್ಲಿ ಒಂದು ವಿಷಯ ಸುಳಿಯ ತೊಡಗಿದೆ. ಅವಿವಾಹಿತನಾದ ನಾನು ಹಂಸಾದೇವಿಯನ್ನೇಕೆ ಮದುವೆ ಮಾಡಿಕೊಳ್ಳಕೂಡದೆಂದು. ಇಂತಹ ಜೊತೆಯನ್ನು ಬ್ರಹ್ಮ ಎಲ್ಲಿಯೂ ಜೋಡಿಸಲಾರನೆಂದು ನನಗನಿಸಿತು. ನಮ್ಮ ದೇಶದ ಕಪ್ಪು ಹುಡುಗಿ ಯರನ್ನು ಕಟ್ಟಿಕೊಂಡು ಬಾಳು ಮಾಡುವುದಕ್ಕಿಂತ ನೇಣು ಹಾಕಿಕೊಳ್ಳು ವುದು ಲೇಸು. ನನ್ನ ಮನದಭಿಲಾಷೆಯನ್ನು ತಿಳಿಸಲಾರದೆ ನಸುನಾಚಿಕೆ ಯಿಂದ ಹಂಸಾದೇವಿಗೆ ತಿಳಿಸಿಯೇ ಬಿಟ್ಟೆ. ಕಾಗದವನ್ನು ಬರೆದು ಹಾಕಿದ ಮೇಲೆ ನಾನು ಮಾಡಿದ್ದು ತಪ್ಪೆಂದು ನನಗೆ ಮನದಟ್ಟಾಯಿತು. ಆದರೆ ಕಾಗದ ಕೈಮಿಂಚಿ ಹೋಗಿತ್ತು ಆಕೆ ಏನು ಬರೆಯುವಳೋ ಎಂಬ ದಿಗಿಲು ನನ್ನ ಮನಸ್ಸನ್ನು ಬಾಧಿಸುತ್ತಿತ್ತು. ಆಕೆ ಇಲ್ಲವೆಂದರೆ ನನ್ನ ಪ್ರಾಣವಾಯುವನ್ನು ಹೇಗೆ ಹಿಡಿದಿರಿಸಬೇಕೆಂದೂ ಯೋಚಿಸಿದೆ.

ಮಾರನೆಯ ದಿನ ಆಕೆಯ ಕಾಗದ ಬಂದಿತು. ಆಕೆ ತನ್ನ ಅನು ಮೋದನೆಯನ್ನು ಕೊಟ್ಟಿದ್ದಲ್ಲದೆ ನಾವು ಆದರ್ಶ ದಂಪತಿಗಳಾಗಿ ಬಾಳ ಬಹುದೆಂದು ತಿಳಿಸಿದಳು. 'ಕವಿ-ಕವಿಯತ್ರಿ' ಎಂಬ ಗೀತೆಯೊಂದನ್ನು ಬರೆದು ಗಂಡ ಹೆಂಡತಿಯರಿಬ್ಬರೂ ಭೂಮದ ಮೇಲೆಯೇ ಕುಳಿತುಕೊಂಡು ಕವಿತೆಗಳನ್ನು ರಚಿಸಬೇಕೆಂದು ತಿಳಿಸಿದ್ದಳು. ಮುಂದಿನ ಭಾನುವಾರ ಬೆಳಿಗ್ಗೆ ಬೆಂಗಳೂರಿಗೆ ಬರುವುದಾಗಿ ಬರೆದಿದ್ದಳು.

ಎಂದೂ ಸುಣ್ಣ ಬಣ್ಣಗಳನ್ನು ಕಾಣದ ನನ್ನ ಕೋಣೆ ಥಳಥಳಗು ಟ್ಟಿತು. ಇದ್ದುದರಲ್ಲಿಯೇ ಗಟ್ಟಿಯಾಗಿದ್ದ ಮತ್ತು ಶುಚಿಯಾಗಿದ್ದ ಬಟ್ಟೆ ಹಾಕಿಕೊಂಡು ಭಾನುವಾರದ ದಿನ ರೈಲ್ವೆ ಸ್ಟೇಷನ್ನಿಗೆ ಹೋದೆ.

ಅಂದೇ ಗಾಡಿ ತಡವಾಗಿ ಬರಬೇಕೆ? ನಾವು ಊರಿಗೆ ಹೊರಡುವ

ದಿನ, ಯಾರಾದರೂ ಊರಿಗೆ ಬರುವ ದಿನ ಗಾಡಿ ತಡವಾಗಿ ಬರುತ್ತದೆ. ಇದು ಅಪವಾದಕ್ಕಿಂತ ನೇಮವೆಂದೇ ಹೇಳಬಹುದು.

ಗಾಡಿ ಬಂದಿತು. ಹಂಸಾದೇವಿ ಇಂಟರ್ ಗಾಡಿಯು ಲ್ಲಿರುವುದಾಗಿ ತಿಳಿಸಿದ್ದರು. ಹಾಳು ಆ ಗಾಡಿ ನಾನು ನಿಂತ ಸ್ಥಳಕ್ಕಿಂತ ಒಂದು ಫರ್ಲಾಂಗ್ ದೂರದಲ್ಲಿರಬೇಕೆ? ಏದುತ್ತ ಓಡಿದೆ. ಒಬ್ಬ ಹೆಂಗಸಿನ ಹತ್ತಿರ ೮-೧೦ ಜನ ಕೂಲಿಯವರು ನಿಂತಿದ್ದರು. ಲೆದರ್ ಸೂಟ್‌ಕೇಸ್ ಒಂದರಮೇಲೆ "ಮಿಸ್|| ಹಂಸಾದೇವಿ, ಬೊಂಬಾಯಿ" ಅಂತ ಬರೆದಿದ್ದನ್ನು ನೋಡಿದೆ. ಅದರ ಒಡತಿ ಹೇಗಿರಬೇಕೆಂದು ಕತ್ತೆತ್ತಿದೆ. ನಲವತ್ತೆರಡು, ನಲವತ್ತುಮೂರು ವರ್ಷದ ನವತರುಣಿ! ಸುಕ್ಕುಗಟ್ಟಿದ ಕೋಲು ಮುಖ, ಕುಳ್ಳಗೆ, ದಪ್ಪಗೆ, ಕಪ್ಪಗಿದ್ದಳು.

ಆಗಲೇ ಹೊರಡಲು ಸಿದ್ಧವಾಗಿದ್ದ ಮೈಸೂರಿಗೆ ಹೋಗುವ ರೈಲಿನಲ್ಲಿ ಹತ್ತಿ ಕುಳಿತು ಮೈಸೂರಿಗೆ ಹೋದೆ.

* * * *

ಮೈಸೂರಿನಿಂದ ಊರಿಗೆ ಬಂದಮೇಲೆ ಹಂಸಾದೇವಿ ಮಾಡಿದ ರಾದ್ಧಾಂತದ ವಿವರಣೆ ನನಗೆ ತಿಳಿಯಬಂದಿತು. ನನ್ನ ಪತ್ರಪ್ರೇಮ ಈ ರೀತಿ ಅವಸಾನ ಹೊಂದಿದ್ದನ್ನು ನೋಡಿ ನನಗೆ ಬಹಳ ವ್ಯಸನವೂ ಆಯಿತು.

ಒಂದು ವಿಷಯ ನಿಮಗೆ ಗುಟ್ಟಿನಲ್ಲಿ ಹೇಳುತ್ತೇನೆ. ಈಗ ನಾನು ಕವಿತೆ ಬರೆಯುವುದನ್ನು ಬಿಟ್ಟು ಸಿನಿಮಾದ ಹತ್ತಿರ ಬೀಡಿ ಅಂಗಡಿ ಇಟ್ಟು ಕೊಂಡು ಸುಖವಾಗಿದ್ದೇನೆ. ಅಲ್ಲದೆ ನಾನು ಮದುವೆಯಾಗಿರುವ ಶಾನು ಭೋಗರ ಮಗಳು ಅಷ್ಟೇನು ಕುರೂಪಿಯೆಂದು ಹೇಳಲಾರೆ.

# ಮುದ್ರಾರಾಕ್ಷಸನ ಹಾವಳಿ

ನಾಗರಿಕತೆ ಶಿಖರಕ್ಕೇರಿದ ಇಂದಿನ ದಿನಗಳಲ್ಲಿ ಅಚ್ಚು ಪದ್ಧತಿಯು ನಮ್ಮ ಜೀವನದಲ್ಲಿ ಹಿರಿದಾದ ಸ್ಥಾನವನ್ನು ಅಲಂಕರಿಸಿದೆಯೆಂಬುದು ಸರ್ವ ವಿದಿತವಾಗಿದೆ ಆದರೆ ಒಂದು ಅನುಕೂಲದ ಹಿಂದೆಯೇ ಅನಾನುಕೂಲವೂ ಸಹ ಛಾಯಾನುವರ್ತಿಯಾಗಿ ಹಿಂಬಾಲಿಸುತ್ತದೆಯೆಂಬುದು ನಿಸರ್ಗ ನಿಯಮ.

ಇದೇ ಅಚ್ಚು ಪದ್ಧತಿಯನ್ನೇ ಉದಾಹರಣೆಗೆ ತೆಗೆದುಕೊಳ್ಳೋಣ. ಮೊದಲಿಗೆ ತಾಳೇಗರಿಯ ಮೇಲೋ ಕಾಗದದ ಮೇಲೋ ಸೊಂಟ ಬಗ್ಗಿಸಿ ದಿನವಿಡೀ ಬರೆದರೂ ನೂರಾರು ಹಾಳೆಗಳು ತುಂಬುತ್ತಿರಲಿಲ್ಲ. ಆದರೆ ಕೇವಲ ಕೆಲವು ಗಂಟೆಗಳಲ್ಲಿ ಮುದ್ರಣ ಯಂತ್ರ ಸಾಮಗ್ರಿ ಸಾಧನ ಗಳಿಂದ ಹಲವಾರು ಸಹಸ್ರ ಪುಸ್ತಕಗಳನ್ನು ಒಂದೇ ದಿನದಲ್ಲಿ ನಾವು ನೋಡ ಬಹುದು. ಮೊಳೆ ಜೋಡಿಸುವವರ ಕೈವಾಡದಿಂದಲೋ, ಪ್ರೂಫ್‌ರೀಡರ್ ಅಲಕ್ಷ್ಯದಿಂದಲೋ ಅನಿವಾರ್ಯವಾಗಿ ಅಚ್ಚು ದೋಷಗಳು ಉಳಿದುಬಿಡು ತ್ತವೆ. ಕೆಲ ಸಂದರ್ಭಗಳಲ್ಲಿ ಇವು ಅತಿಯಾದ ವಿಪರ್ಯಾಸ ಕೊಡುವಂತಹ ಶಬ್ದಗಳಾಗಿ ಮಾರ್ಪಟ್ಟು ಅನರ್ಥಕ್ಕೇ ಕಾರಣವಾಗುತ್ತದೆ. ನನ್ನ ಅನುಭವಕ್ಕೆ ಬಂದಿರುವ ಅಂತಹ ಶಬ್ದಗಳನ್ನಿಲ್ಲಿ ಮಾದರಿಗಾಗಿ ಕೊಟ್ಟಿದ್ದೇನೆ, 'ಮಹಾತ್ಮ ಗಾಂಧಿಯವರು ಈ ದಿನ ಸೇವಾಗ್ರಾಮದಿಂದ ಹಾದರಕ್ಕೆ ಬಂದಿಳಿದರು.' ದಾದರಕ್ಕೆ ಬಂದಿಳಿದರು ಎಂದಿರಬೇಕಿತ್ತು. ಪೂಜ್ಯ ಗಾಂಧಿಜಿಯವರನ್ನೇ ದುಸ್ಥಿತಿಗೀಡುಮಾಡುವ ಈ ಕಂಪಾಜಿಟರ್ ಮಹಾ ಶಯ ನಮ್ಮಂತಹವರನ್ನು ಏನು ಮಾಡುವನೋ ?

ಒಂದು ವಾಕ್ಯದಲ್ಲಿ 'ಮಂತ್ರಿಮಂಡಲ' ಎಂಬುದು 'ಮೂತ್ರಿಮಂಡಲ'

ಎಂಬುದಾಗಿತ್ತು, ಕೊಳಿತು ನಾರುವ ಆ 'ಮಂತ್ರಿಮಂಡಲ'ವನ್ನು 'ಮೂತ್ರಿ ಮಂಡಲ' ಮಾಡಿದ ಆ ಮಹಾಶಯನ ಬುದ್ಧಿ ಚಾತುರ್ಯಕ್ಕೆ ಸಾಟಿ ಯುಂಟೆ !

ಒಬ್ಬ ರಾಯನ ಗುಣಗಾನ ಮಾಡುವ ಪ್ರಸಂಗ. 'ಅವರ ಮನಸ್ಸು ಪೂರಾ ಚಿಕ್ಕದು' ಅವರ ವಯಸ್ಸು ಪೂರಾ ಚಿಕ್ಕದು ಎಂತ ಇರಬೇಕಾಗಿತ್ತು. ಇದನ್ನೋದಿದ ಆ ರಾಯರು ಆ ದುರದೃಷ್ಟ ಪತ್ರಿಕೆಯ ಮೇಲೆ ಮಾನನಷ್ಟ ಮೊಕದ್ದಮೆ ಹೂಡುವ ಯೋಚನೆ ಮಾಡುತ್ತಾರೋ ಇಲ್ಲವೋ ನೀವೇ ಹೇಳಿ.

ಒಂದು ಸಂಸ್ಥಾನದ ಅರಸರ ಪಟ್ಟಾಭಿಷೇಕ ಮಹೋತ್ಸವದ ವರ್ಣನೆ ಒಂದು ಪತ್ರಿಕೆಯಲ್ಲಿ ಅವ್ಯಾಹತವಾಗಿತ್ತು. ಹಾಗೆಯೇ ರಾಣಿಯವರ ಪಟ್ಟಾಭಿಷೇಕ ಕುರಿತು "ಇವರಿಗೆ ಕೆರೆಯಲ್ಲಿ ಪಟ್ಟಾಭಿಷೇಕವಾಗುವುದು" ಎಂತ ಅಚ್ಚಾಗಿತ್ತು. "ಇವರಿಗೆ ತೆರೆಯಲ್ಲಿ ಪಟ್ಟಾಭಿಷೇಕವಾಗುವುದು" ಎಂಬುದಾಗಿ ಇರಬೇಕಾಗಿತ್ತು.

ಮಹಾ ಮೇಧಾವಿಗಳೊಬ್ಬರು ಹೆಚ್ಚಿನ ಶಿಕ್ಷಣಕ್ಕೆ ಅಮೆರಿಕಕ್ಕೆ ಹೋಗಿ ಆಗ ತಾನೆ ನಮ್ಮ ದೇಶಕ್ಕೆ ಮರಳಿದ್ದರು. ಅವರ ಬಗ್ಗೆ ಒಂದು ದಿನಪತ್ರಿಕೆಯಲ್ಲಿ ಸುದ್ದಿ ಈ ರೀತಿ ಪ್ರಕಟವಾಗಿತ್ತು. "ಇವರು ಅಮೆರಿಕಕ್ಕೆ ಹೋಗಿ ಅಭಾಸ ಮಾಡಿಕೊಂಡು ಬಂದಿದಾರೆ" "ಅಭ್ಯಾಸ ಮುಗಿಸಿಕೊಂಡು ಬಂದಿದ್ದಾರೆ" ಎಂತ ಇರಬೇಕಿತ್ತು. ಆದರೆ ಕುಶಾಗ್ರಮತಿ ಕಂಪಾಜಿಟರನು ಅಮೆರಿಕದಲ್ಲಿ ಈ ಮಹನೀಯರ ಅಭಾಸಪ್ರಕರಣ ಮುಗಿದು ಹಿಂದೂಸ್ಥಾನದಲ್ಲಿ ಮತ್ತೆ ಆರಂಭವಾಗಲಿದೆಯೆಂಬ ಅಂಶವನ್ನು ಜನತೆಗೆ ಅರುಹಿ ಮಹದುಪಕಾರ ಮಾಡಿದನು.

ದಿನಪತ್ರಿಕೆಗಳಲ್ಲಿ ಅಂದಿನ ಮಹತ್ವದ ಸುದ್ದಿಯನ್ನು ಕುಂಬಳಕಾಯಿ ಅಕ್ಷರದಲ್ಲಿ ಪ್ರಕಟಿಸುವ ಪರಿಪಾಠ ಬಹು ದಿನಗಳಿಂದಲೂ ಅನುಷ್ಠಾನದಲ್ಲಿದೆ. ಒಂದು ಸಾರಿ ಮಹಿಳಾ ದೇಶಪ್ರೇಮಿಗಳೊಬ್ಬರಿಗೆ ೬ ತಿಂಗಳ ಶಿಕ್ಷೆ ವಿಧಿಸಲಾಯಿತು. ಅಂದು ಅದೇ ಮಹತ್ವದ ಸುದ್ದಿಯಾಗಿತ್ತು. ಸರಿ,

ಸಂಪಾದಕರು ಬರೆದುಕೊಟ್ಟರು. "........ರವರಿಗೆ ೬ ತಿಂಗಳು ಸಶ್ರಮ ಶಿಕ್ಷೆ" ಆದರೆ ಮಾರನೆಯ ದಿನ ಪತ್ರಿಕೆಗಳಲ್ಲಿ "....ರವರಿಗೆ ೬ ತಿಂಗಳು" ಎಂದಿತ್ತು. ಗಂಡಸಿಗೆ ೬ ತಿಂಗಳು ಎಂದರೆ ಅಪಾರ್ಥವಾಗುವುದಿಲ್ಲ, ಆದರೆ ಹೆಂಗಸಿಗೆ ೬ ತಿಂಗಳೆಂದರೆ? ಅಪರಾಧಗೈದ ಕಂಪಾಜಿಟರನನ್ನು ಕೇಳಿದಾಗ ಸ್ಥಳಾಭಾವದಿಂದ ಹಾಗೆ ಮಾಡಿದೆನೆಂದು ಸಮಾಧಾನ ಕೊಟ್ಟ. ಆ ದುರದೃಷ್ಟ ಸಂಪಾದಕರ ಗತಿ ಏನಾಗಿರಬಹುದು ನೀವೇ ಯೋಚಿಸಿ.

ಈಗ್ಗೆ ಕೆಲವು ದಿನಗಳ ಹಿಂದೆ ಕರ್ನಾಟಕದ ಗಣ್ಯರೊಬ್ಬರು ವಿಧಿವಶ ರಾದರು. "........ರವರ 'ವಿಯೋಗ' ಎಂಬುದು "........ರವರ 'ನಿಯೋಗ' ಎಂತ ತಪ್ಪು ಬಿದ್ದಿತ್ತು. ಸತ್ತಮೇಲೂ ಅವರು ನಿಯೋಗ ಹೋಗುವ ಅವರ ದಾರ್ಷ್ಟಿಕ ನೋಡಿ ಜನ ಅಚ್ಚರಿಗೊಂಡಿರಬೇಕಲ್ಲವೇ ?

ತಿಳಿಯುದಿದ್ದನ್ನು ಕೇಳಿ ತಿಳಿದುಕೊಳ್ಳಬೇಕೆಂಬ ಹವ್ಯಾಸಕ್ಕೆ ಮೊಳೆ ಜೋಡಿಸುವವ ಪ್ರಾಣ ಹೋದರೂ ಬೀಳಲಾರ. ಒಂದು ಸಾರಿ ನಾನು ಯಾವುದೋ ಒಂದು ಲೇಖನದಲ್ಲಿ "ಹಂಸತೂಲಿಕಾ ತಲ್ಪ" ಎಂತ ಪ್ರಯೋಗ ಮಾಡಿದ್ದೆ. ನನ್ನ ಕಂಪಾಜಿಟರ್ ಇದನ್ನು "ಕೂಲಿಕಾರರ ಕೆಲ್ಸ" ಎಂತ ಮಾಡಿದ್ದ. ನಾನು ಏನು ಬರೆದಿದ್ದೆ ಎಂಬುದು ನನಗೆ ತಿಳಿಯ ಲಿಲ್ಲ. ಈ ಅಭಿನವ ಬ್ರಹ್ಮನಿಗೆ ಅಂದು ನಾನು ಮನಸಾ ವಂದಿಸಿದೆ.

ಹಳೆ ದಿನದ ಮಿತ್ರನನ್ನು ಒಬ್ಬನು ಕಾಣುತ್ತಾನೆ. ತನ್ನ ಪ್ರೀತಿಯ ಪ್ರದರ್ಶನಾರ್ಥವಾಗಿ "ಎರಡು ಕರಗಳನ್ನೂ ಹಿಡಿದು ವಂದಿಸಿದನು" ಎಂತ ಕತೆಯಲ್ಲಿ ಒಂದು ಪ್ರಸಂಗ. ಈ ಸನ್ನಿವೇಶ ಕಂಪಾಜಿಟರನ ಕೈವಾಡ ದಿಂದ "ಎರಡು ಕೆರಗಳನ್ನೂ ಹಿಡಿದುಕೊಂಡು ವಂದಿಸಿದನು" ಎಂತ ಬದ ಲಾಗಿತ್ತು. ಕತೆಗಾರ ಹೊಳೆ ಬಾವಿ ಹಾರಿಕೊಂಡು ಮಾನ ಉಳಿಸಿ ಕೊಳ್ಳಲು ಯತ್ನಿಸಿದ್ದನಂತೆ !

ಒಂದು ಪತ್ರಿಕೆಯಲ್ಲಿ 'ದಿವಾನರು ಸಭಾಧ್ಯಕ್ಷತೆ ವಹಿಸಿದ್ದರು' ಎಂಬುದರ ಬದಲಾಗಿ 'ಜವಾನರು' ಎಂತ ತಪ್ಪು ಬಿದ್ದಿತ್ತು.

"ಕಾಂಗ್ರೆಸ್ಸಿನವರಿಗೆ ಮಂತ್ರಿತ್ವ ಕೊಟ್ಟರೆ ರಾಜಕೀಯ ವ್ಯವಸ್ಥೆಗೆ

ಸಹಕಾರಿಯಾಗುತ್ತದೆ" ಎಂಬ ವಾಕ್ಯದಲ್ಲಿ 'ಅ' ಅಕ್ಷರವು 'ವ್ಯವಸ್ಥೆ' ಶಬ್ದದ ಹಿಂದುಗಡೆ ಬಿದ್ದು 'ಅವ್ಯವಸ್ಥೆ' ಎಂತಾಯಿತು.

"ಚತುರ್ಮಹಾನಾಯಕರ ಭೇಟಿ ಜರುಗಿದರೆ ಯುದ್ಧ ಸುಸಂಘಟಿತ ರೀತಿಯಲ್ಲಿ ನಡೆಯುವ ಸಂಭವವಿದೆ"ಎಂಬುದಕ್ಕೆ ಪ್ರತಿಯಾಗಿ "ನಡೆಯುವದ ಸಂಭವ" ಎಂತ ಬಿದ್ದಿತ್ತು.

ಹೀಗೆ ಈ ಸಾಹಿತ್ಯವನ್ನು ಬೇಕಾದಷ್ಟು ಲಂಬಿಸಬಹುದು ಇದರಲ್ಲಿ ಅತಿಶಯೋಕ್ತಿಯೇನೂ ಇಲ್ಲ.

ಆದರೆ ಒಂದು ವಿಷಯ. ನಗೆಯನ್ನು ಹೊಗೆಯಾಗಿಯೂ, ಹೊಗೆಯನ್ನು ನಗೆಯಾಗಿಯೂ ಮಾರ್ಪಡಿಸಬಲ್ಲ ಆ ದಿವ್ಯ ಶಕ್ತಿ ಕಂಪಾಜಿಟರಿಗಲ್ಲದೆ ಬೇರೊಬ್ಬರಿಗೆ ಇಲ್ಲ. "ರವಿ ಕಾಣದ್ದನ್ನು ಕವಿ ಕಂಡ" ಎಂತ ಹೇಳುತ್ತಾರೆ. ಆದರೆ "ಕವಿ ಕಾಣದ್ದನ್ನು ಕಂಪಾಜಿಟರ್ ಕಾಣುತ್ತಾನೆ" ಎಂತ ನಾಣ್ಣುಡಿಯು ಸಹ ಮಾರ್ಪಾಟು ಹೊಂದಬೇಕಾಗಿದೆ.

# ಮಕ್ಕಳು

ನಾನು ಮಕ್ಕಳ ಪ್ರಪಂಚ, ಮಕ್ಕಳ ಲೋಕ, ಬಾಲಪ್ರಪಂಚ, ಶಿಶುಸಾಹಿತ್ಯ ಮುಂತಾದ್ದನ್ನು ಬರೆಯುತ್ತಿಲ್ಲ. ಮಕ್ಕಳ ಬಗ್ಗೆ ನನ್ನ ಕೆಲ ಅನುಭವಗಳನ್ನು ಬರೆದಿದ್ದೇನೆ ಇವು ಕೇವಲ ನನ್ನ ಸ್ವಂತ ಅನುಭವಗಳೇ ಆದ್ದರಿಂದ ಇವುಗಳ ಸತ್ಯಾಸತ್ಯದ ಬಗ್ಗೆ ಯಾವತರಹೆ ಪ್ರಶ್ನೆಯೂ ಉದ್ಭವಿಸುವುದಿಲ್ಲವೆಂದು ನಂಬಿ ನನ್ನ ಪ್ರಬಂಧವನ್ನು ಮುಂದುವರಿಸುತ್ತೇನೆ.

ಮೊದಲನೆಯದಾಗಿ ಮಕ್ಕಳ ಬಗ್ಗೆ ಪ್ರಬಂಧ ಬರೆಯಲು ನನಗೆ ತಕ್ಕ ಅಧಿಕಾರವೂ, ಯೋಗ್ಯತೆಯೂ ಇದೆಯೆಂದು ದೃಢವಾಗಿ ಹೇಳಬಲ್ಲೆ. ಏಕೆಂದರೆ ನನಗೆ ೧೩ ಜನ ಮಕ್ಕಳಿದ್ದಾರೆ. ೧೨ ಗಂಡು ಮತ್ತು ಕೊನೆಯದೊಂದು. (ಈಗ ಸದ್ಯಕ್ಕೆ ಹೆಣ್ಣು) "ಅಪುತ್ರಸ್ಯ ಗತಿರ್ನಾಸ್ತಿ" ಎಂಬುದು ನನಗೆ ಅನ್ವಯಿಸಲಿಕ್ಕಿಲ್ಲವೆಂದು ನನಗನಿಸುತ್ತದೆ ಏನೋ ಈ ೧೩ರಲ್ಲಿ (ಅಂಕಿ ಕೆಟ್ಟದೆಂದು ನೀವು ಸ್ವಲ್ಪ ಮೋರೆ ಸೊಟ್ಟೆಮಾಡಬಹುದು) ಜೊಳ್ಳು ಜೊಟ್ಟರುಗಳು ಹೋದರೂ ಗತಿ ಕಾಣಿಸಲು ಒಬ್ಬನಾದರೂ ಉಳಿಯಬಹುದೆಂಬ ಆತ್ಮವಿಶ್ವಾಸ ನನಗಿದೆ. ನಮ್ಮ ಕುಲದೇವರು ಸಂತಾನ ಗೋಪಾಲ ಕೃಷ್ಣ. ಈ ದೇವರನ್ನೇ ನಾವಿಬ್ಬರೂ (ನಾನು, ಹೆಂಡತಿ) ಪೂಜಿಸುತ್ತಿದ್ದೆವು. ಆದ್ದರಿಂದಲೇ ನಮಗೆ ೧೨ ಜನ ಗಂಡು ಮಕ್ಕಳು ತಪ್ಪದೆ ಆದವೆಂದು ಈಗ ತಿಳಿದು ಬಂದಿದೆ. ಅಲ್ಲದೆ ಬರೀ ಗಂಡು ಮಕ್ಕಳೇ ಹೆಚ್ಚಾದುದರಿಂದ ಮನೆಯಲ್ಲಿ ಬಹುಮತವು ನನ್ನ ಕಡೆಗೇ ಹೆಚ್ಚುತ್ತದೆಯೆಂಬ ಭೀತಿಯಿಂದ ನನ್ನ ಹೆಂಡತಿ ಸಂತಾನ ಗೋಪಾಲಕೃಷ್ಣನನ್ನು ಎಲ್ಲಿಯೋ ಮರೆಮಾಡಿ ಒಂದು ದೇವಿಯ ವಿಗ್ರಹವನ್ನು ಪೂಜೆಗೆ ಇಟ್ಟುದರ ಫಲವಾಗಿ ೧೯೫೬ನೆಯ ಮಾಡಲಿನದು ಒಂದು ಹೆಣ್ಣಾಗಿದೆ.

ಮಕ್ಕಳಿಲ್ಲದ ಮನೆ ಮಸಣಕ್ಕೆ ಸಮಾನವೆಂಬುದನ್ನು ಒಪ್ಪುತ್ತೇನಾದರೂ, ಆ ಮಕ್ಕಳು ಕೊಡುವ ಉಪದ್ರವವನ್ನು ನೆನಸಿಕೊಂಡರೆ, ಆ ಶಾಂತಿಯಿಂದ ಆವೃತವಾದ ಮಸಣವೇ ಲೇಸೆನಿಸುತ್ತದೆ ಎಲ್ಲರ ಅನುಭವ ಅಭಿಪ್ರಾಯಗಳು ನನ್ನಂತೆಯೇ ಇವೆಯೆಂದು ನಾನೇನು ತಿಳಿಯುವುದಿಲ್ಲ. ನನ್ನ ಅನುಭವಗಳನ್ನು ನಾನು ವಿವರಿಸಿದ ಮೇಲೆ ನಾನು ಹೇಳುವುದಕ್ಕೆ ನಿಮ್ಮ ಒಪ್ಪಿಗೆ ಮುದ್ರೆ ಹಾಕುವಿರೆಂದು ನಂಬಿದ್ದೇನೆ.

ಒಂದು ಸಾರೆ ನನ್ನ ಎರಡು ಹುಡುಗರು (ಹುಡುಗರ ಹೆಸರನ್ನು ಹೇಳುತ್ತ ಹೋದರೆ ನಿಮಗೆ ಸಂದಿಗ್ಧವಾಗುವುದೆಂದು ಸಂಖ್ಯೆಗಳನ್ನು ಕೊಡುತ್ತೇನೆ—ಪೋಲೀಸಿನವರಿಗೂ ಮತ್ತು ಕೈದಿಗಳಿಗೂ ನಂಬರ್ ಕೊಟ್ಟಿರುತ್ತಾರಲ್ಲ ಹಾಗೆ) ೧೧ ಮತ್ತು ೯ನೆಯ ಸಂಖ್ಯೆಯ ಹುಡುಗರು ಒಂದು ಸಾರಿ ಮೂರು ಗಾಲಿ ಬೈಸಿಕಲ್ ಸವಾರಿ ಮಾಡಲು ಹೋಗಿ, ಎದುರಿಗೆ ಬರುತ್ತಿದ್ದ ಮೋಟಾರ್‌ನಿಂದ ಅಕಸ್ಮಾತ್ ಪ್ರಾಣ ಉಳಿಸಿಕೊಳ್ಳಲು ಪ್ರಯತ್ನಿಸಿ ಇಬ್ಬರಿಗೂ ಗಾಯಗಳಾದವು. ಚಿಕ್ಕವನಿಗೆ ದೊಡ್ಡ ಗಾಯವೂ ದೊಡ್ಡವನಿಗೆ ಚಿಕ್ಕ ಗಾಯವೂ ಆಗಿತ್ತು. ಕೂಡಲೇ ಅವರನ್ನು ಆಸ್ಪತ್ರೆಗೆ ಸಾಗಿಸಲಾಯಿತು. ಆಸ್ಪತ್ರೆಯಲ್ಲಿ ಇಬ್ಬರಿಗೂ ಪಟ್ಟಿಗಳನ್ನು ಕಟ್ಟಿ ಕಳುಹಿಸಿದರು. ಆದರೆ ಮನೆಗೆ ಬರುವ ಹೊತ್ತಿಗೆ ದೊಡ್ಡವನ ಗಲಾಟೆ ಬಹಳವಾಯಿತು. ಚಂದ್ರನನ್ನು ತಂದುಕೊಡಲು ಶ್ರೀರಾಮಚಂದ್ರನು ಅಳುವಂತೆ, ಅಳಲಾರಂಭಿಸಿದ. ಮಂತ್ರಿ ಕನ್ನಡಿ ತೋರಿಸಿ ಶ್ರೀರಾಮಚಂದ್ರನನ್ನು ಸಮಾಧಾನಪಡಿಸಲು ಪ್ರಯತ್ನಿಸಿದಂತೆ ನಾನು ಪ್ರಯತ್ನಿಸಿದೆ. ಆದರೆ ನನ್ನ ಮಗ ಮಾನವ ಹಟವಾರಿ. ಶ್ರೀರಾಮಚಂದ್ರ, ಪರಮಾತ್ಮ! ಎಲ್ಲಿ ಎಲ್ಲಿಯ ಸಂಬಂಧ ? ಆಸ್ಪತ್ರೆಯಲ್ಲಿ ದೊಡ್ಡ ಹುಡುಗನಿಗೆ ಚಿಕ್ಕ ಪಟ್ಟಿಯನ್ನೂ ಚಿಕ್ಕ ಹುಡುಗನಿಗೆ ದೊಡ್ಡ ಪಟ್ಟಿಯನ್ನೂ ಹಾಕಿದ್ದರಷ್ಟೆ. ದೊಡ್ಡವನಿಗೆ ಅದೇ ಹೊಟ್ಟೆಯುರಿ, ತಮ್ಮನಿಗೆ ತನಗಿಂತ ದೊಡ್ಡ ಪಟ್ಟಿಯಿದೆಯೆಂದು. ಇದು ವಯೋಧಿಕಾರದ ಪ್ರಶ್ನೆ. ನಾವೇನೋ ಹೇಳಿದೆವು. ಅವನು ಚಿಕ್ಕವನಾದರೂ ದೊಡ್ಡ ಗಾಯವಾಗಿದೆಯೆಂದು. ಆದರೆ ನಮ್ಮ ತರ್ಕ ಅವನ ತಲೆಗೆ ಹಿಡಿಯಬೇಕಲ್ಲ ?

ಮೇಲೆ ಹೇಳಿದ ಪ್ರಸಂಗ ನಮ್ಮ ಹುಡುಗರ ಮೊಂಡುತನ ತೋರಿಸುವದಾಯಿತಷ್ಟೆ. ಆದರೆ ಮಕ್ಕಳು, ದೊಡ್ಡವರು ಕೈ ಹಿಸುಕಿಕೊಳ್ಳುವಂತೆ ಹೇಗೆ ಮಾಡುತ್ತಾರೆಂಬುದನ್ನು ಹೇಳುತ್ತೇನೆ. ನನ್ನ ಪುರಾತನ ಸ್ನೇಹಿತರೊಬ್ಬರು ನನ್ನನ್ನು ನೋಡಲು ನಮ್ಮ ಮನೆಗೆ ಬಂದರು ಅವರು ನಿಷ್ಠಾವಂತ ಸನಾತನಿ ಶ್ರೀ ವೈಷ್ಣವರು. ೭ನೇ ನಂ. ಹುಡುಗ ಹೊರಗಡೆ ಆಡುತ್ತಿದ್ದವನು ಒಂದೇ ಬಾರಿಗೆ ಒಳಗೆ ಧಾವಿಸಿ ಬಂದು, "ಅಪ್ಪಾ ಯಾರೋ ದಾಸಯ್ಯ ಬಂದಿದ್ದಾನೆ" ಎಂದ. ಹುಡುಗನಿಗೆ ಭಿಕ್ಷ ಹಾಕಲು ಹೇಳಿದರೆ ಅಕ್ಕಿಯನ್ನೆಲ್ಲಾ ಚೆಲ್ಲಿಬಿಡುವನೆಂದು ನಾನೇ ನಡುಮನೆಯಲ್ಲಿದ್ದ ಅಕ್ಕಿಯನ್ನು ಬೊಗಸೆಯಲ್ಲಿ ತೆಗೆದುಕೊಂಡು ಹೋದೆ.........? ಸರಿ ಅವರಿಗೆ ನಮ್ಮ ಹುಡುಗನ ವೃತ್ತಾಂತ ತಿಳಿಸಿ ಅನಂತ ಕ್ಷಮೆಗಳನ್ನು ಬೇಡಿದ್ದಾಯಿತು. ಅವರನ್ನು ಸಮಾಧಾನಪಡಿಸಲು ಮಧ್ಯಾಹ್ನದ ಊಟಕ್ಕೆ ಸಹ ಎಬ್ಬಿಸಬೇಕಾಯಿತು.

ಮಕ್ಕಳಿದ್ದರೆ ಅನುಕೂಲಗಳು ಸಹ ಇವೆಯೆಂದು ಒಂದಲ್ಲ ಹತ್ತಾರು ಸಾರಿ ನನ್ನ ಅನುಭವಕ್ಕೆ ಬಂದಿದೆ. ಒಂದು ಸಾರಿ ಆಫೀಸಿನಲ್ಲಿ ಅಚಾತುರ್ಯವೊಂದನ್ನು ಮಾಡಿದೆ. ಮನೆಗೆ ಕಳುಹಿಸುವಂತಹ ತಪ್ಪನ್ನೇ ಮಾಡಿದ್ದೆ. ಆಗ ನನ್ನ ಮಕ್ಕಳೇ ನನ್ನನ್ನು ಪಾರುಮಾಡಿದವು. ನಿಮಗೆ ಆಶ್ಚರ್ಯವಾಗಬಹುದು. ಆ ಪುಟ್ಟ ಕುನ್ನಿಗಳು ನನ್ನನ್ನು ಹೇಗೆ ಉಳಿಸಿದುವೆಂದು ಹೇಳುತ್ತೇನೆ ಕೇಳಿ. ನಮ್ಮ ಆಫೀಸರು ಖಾಸಗೀ ಕೋಣೆಗೆ (ಪ್ರೈವೇಟ್ ಚೇಂಬರ್) ಕರೆದರು. ಆಯಾಸವಾಗುವವರೆಗೆ ಬಯ್ದರು. ನನ್ನ ಕೆಲಸಕ್ಕೆ ಗೇಟ್ ಪಾಸ್ ಕೊಟ್ಟರೆಂದೂ, ಇಲ್ಲವೆ ಹಸುರು ಬಾವುಟ ಬೀಸಿದರೆಂದೂ ತಿಳಿದೆ. ಆದರೆ ಅವರು, "ಕೃಷ್ಣಪ್ಪಾ ನಿನಗೆ ಮಕ್ಕಳೆಷ್ಟು ?" ಎಂದರು. ತಡವರಿಸುತ್ತ "೧೩" ಎಂದೆನು. "ಹ....ದಿ....ಮೂ....ರು" ಎಂದು ನಾಟಕದಲ್ಲಿ ನಾಯಕರು ಸ್ವಗತವಾದ ಮಾತಾಡಿದರೆ ಎದುರಿಗಿದ್ದವರಿಗೆ ಘಂಟಾಘೋಷವಾಗಿ ಕೇಳುತ್ತಿದ್ದರೂ ಕೇಳದಂತೆ ಬೆಪ್ಪಾಗಿ ನಿಂತಿರುವಂತೆ ನಿಂತಿದ್ದೆ. ಕೊನೆಗೆ ಅವರು "ಮಕ್ಕಳೊಂದಿಗ, ನಿನ್ನನ್ನು ಕೆಲಸದಿಂದ ತೆಗೆದುಹಾಕಿದರೆ ಮಕ್ಕಳುಮರಿ ಉಪವಾಸ ಬೀಳುತ್ತಾರೆ. ಇನ್ನೊಂದು ಸಾರಿ ಏನಾದರೂ ಸ್ವಲ್ಪ

ತಪ್ಪು ಮಾಡಿದರೂ ಮನೆಗೆ ಕಳುಹಿಸುತ್ತೇನೆ" ಎಂದರು. ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷದ ಆಯುಸ್ಸು. ಅಂತೂ ಇದುವರೆಗೆ ಸುಖವಾಗಿ ಕೆಲಸ ಮಾಡಿಕೊಂಡು ಬಂದಿದ್ದೇನೆ. ಆದರೆ ನನಗೆ ೧೩ ಜನ ಮಕ್ಕಳಿಲ್ಲದಿದ್ದರೆ ನನ್ನ ಕೆಲಸ ಉಳಿಯುತ್ತಿತ್ತೆ ?

ಮಕ್ಕಳಿದ್ದರೆ ಇದಕ್ಕೂ ಹೆಚ್ಚಿನ ಅನುಕೂಲಗಳಿವೆ ನಮ್ಮನ್ನು ಯಾರಾದರೂ ಕಂಡು ಕುಶಲ ಪ್ರಶ್ನೆಗಳನ್ನು ಮಾಡುವಾಗ, "ನಿಮಗೆ ಆಸ್ತಿಯೆಷ್ಟಿದೆ? ಸಾಲವೆಷ್ಟಿದೆ?" ಎಂದು ಯಾರೂ ಕೇಳುವುದಿಲ್ಲ. "ಮಕ್ಕಳೆಷ್ಟು?" ಎಂದು ಸರಾಗವಾಗಿ ನೀರು ಕುಡಿದಂತೆ ಕೇಳುತ್ತಾರೆ. ಆಗ ನಾವು ಗಂಭೀರವಾಗಿ, ಮೀಸೆಯನ್ನು ಸವರುತ್ತ, ಎದೆ ಉಬ್ಬಿಸುತ್ತ, ಬರೀ ಗಂಟಲಿನಿಂದಲೇ "ಏನೋ ಪರಮಾತ್ಮನ ಕೃಪೆಯಿಂದ ೧೩ ಕೊಪ್ಪರಿಗೆಗಳಿವೆ" ಎಂದು ಆನಂದದಿಂದ ಹೇಳುವ ಧಾಟಿ ಆ ಸಮಯದಲ್ಲಿ ನಮ್ಮನ್ನು ಎಷ್ಟೋ ದೊಡ್ಡ ಅಂತಸ್ತಿಗೇರಿಸುತ್ತದೆ. ಮತ್ತು ಮಕ್ಕಳು ಮರಿ ಇದ್ದವರು ಕರುಣಾಳುಗಳೂ ದಯಾಶಾಲಿಗಳೂ, ಮಕ್ಕಳಿಲ್ಲದವರು ಗೂಬೆಗಳು ಕಟುಕರೂ ಅಂತ ಪ್ರತೀತಿ ಇದೆ. ಆದರೆ ಈ ಮಕ್ಕಳಲ್ಲಿ ಒಂದಲ್ಲ ಒಂದು ಗಲಾಟೆಯಿಂದ ನಾನಂತೂ ಬಹು ಸಿಡುಕಿಯಾಗಿದ್ದೇನೆ, ಗೂಬೆಯಾಗಿದ್ದೇನೆ.

ಕಾರಣವಿಷ್ಟೆ. ಅನೇಕ ಸಂದರ್ಭಗಳಲ್ಲಿ ನಮ್ಮ ಹುಡುಗರು ನಮಗೆ ಬಹಳ ಗಸ್ತು ಕೊಟ್ಟಿದ್ದಾರೆ. ಅದೇನು ನಮ್ಮ ಮೇಲಿನ ಹೊಟ್ಟೆಯ ಕಿಚ್ಚಿನಿಂದಾಗಲೀ ಅಥವಾ ಮೋಜಿಗಾಗಲೀ ಹಾಗೆ ಮಾಡುತ್ತವೆಯೆಂದು ನಾನು ಹೇಳುವದಿಲ್ಲ. ಒಂದು ಸಾರಿ ದೀಪಾವಳಿಯ ಹಬ್ಬ. ಅನಾನುಕೂಲದ ದೆಸೆಯಿಂದ(ದೇವರು ನಮಗೆ ತಾಪತ್ರಯ ಕೊಟ್ಟು ಮರೆತಿದ್ದಾನಷ್ಟೆ!) ಮನೆಯಲ್ಲಿ ಹಬ್ಬ ಮಾಡಲು ಸಾಧ್ಯವಾಗಲಿಲ್ಲ. ಆದರೆ ಕುತೂಹಲಿಗಳಾದ ನೆರೆಹೊರೆಯವರನ್ನಂತೂ ಸಮಾಧಾನಪಡಿಸಬೇಕಲ್ಲ. ನೆರೆಮನೆ ಪುಟ್ಟಮ್ಮನವರು ನನ್ನ ಅರ್ಧಾಂಗಿಯನ್ನು ಅಡಿಗೆಯೇನೆಂದು ಕೇಳಿದರು. ನನ್ನರ್ಧಾಂಗಿ ಕೆಮ್ಮಿ, ಕ್ಯಾಕರಿಸಿ, ಗಂಟಲು ಸರಿಪಡಿಸಿ, ಭುಜ ಹಾರಿಸಿ, ಕಣ್ಣುಗಳನ್ನು ಕುಣಿಸಿ, ವೈಯಾರದಿಂದ "ಏನೋ ಹಬ್ಬ ಮಾಡಲಾಗಲಿಲ್ಲ. ಅನ್ನ, ಸಾರು,

ಪಾಯಸ, ತೊವ್ವೆ, ಕೋಸಂಬರಿ" ಎಂತ ಹೇಳಿ ಹಬ್ಬ ಮಾಡದಿದ್ದ ಅಪರಾಧ ದಿಂದ ಪಾರಾಗಲು ಸುಳ್ಳು ಹೇಳಿದಳು. ಈ ಸುಳ್ಳನ್ನು ಚಿತ್ರಗುಪ್ತರು ತಮ್ಮ ನೋಟ್‌ಬುಕ್‌ನಲ್ಲಿ ಟಿಪ್ಪಣಿ ಮಾಡಿಕೊಳ್ಳಲು ಮರೆಯಬಹುದು. ಆದರೆ ಮಗ್ಗುಲಲ್ಲೇ ಆಡುತ್ತಿದ್ದ ನನ್ನ ೬ನೆಯ ಮಗ ತಕ್ಷಣವೇ "ಎಲ್ಲಮ್ಮಾ, ಪಾಯಸ, ಸುಳ್ಳು ಹೇಳುತ್ತೀಯಾ" ಎಂದ. ನನ್ನ ಹೆಂಡತಿ ಕಕ್ಕಾ ಬಿಕ್ಕಿಯಾದಳು. "ಇಲ್ಲ, ಪಾಪ! ಇವನಿಗೇನು ತಿಳಿಯುತ್ತೆ" ಎಂತ ದೈನ್ಯ ವಾಗಿ ಈ ಕುತ್ತಿನಿಂದ ಪಾರುಮಾಡಲು ಮಗನ ಕಡೆಗೆ ತಿರುಗಿದಳು. ಹುಡುಗ ಬಿಡಲಿಲ್ಲ. "ಇಲ್ಲಮ್ಮಾ, ಎಲ್ಲರ ಮನೆಯಲ್ಲೂ ಪಾಯಸ ಮಾಡಿದ್ದಾರೆ. ನೀನು ಮಾಡಿಲ್ಲಾ ಅಂತ ಅತ್ತಿದ್ದಕ್ಕೆ ಅಣ್ಣ ಹೊಡೀಲಿಲ್ವೇ?" ಎಂದು ಮತ್ತೊಂದು ಪ್ರಶ್ನೆ ಬಿಗಿದ. ಒಲೆಯ ಮೇಲಿಟ್ಟಿರುವ ಅನ್ನ ಸೀದುಹೋಗುತ್ತ ದೆಯೆಂದು ಏನೋ ನೆಪ ಹೇಳಿ ಮನೆಗೆ ಬಂದವಳೇ ೬ನೆ ನಂಬರ್ ಹುಡುಗ ನನ್ನು ಮನಸ್ವಿ ಹೊಡೆದಳು. ಎಷ್ಟು ಹೊಡೆದರೇನು ಹೋದ ಮರ್ಯಾದೆ ಬರುತ್ತದೆಯೆ ?

ಒಂದು ಸಾರಿ ನನ್ನ ಹಿರಿಯ ಮಗನಿಗೆ ಕನ್ಯೆ ಕೊಡಬೇಕೆಂದು ಮಾತು ಕತೆಗಳನ್ನಾಡಲು ಒಬ್ಬ ದೊಡ್ಡ ಮನುಷ್ಯರು ಬಂದಿದ್ದರು. ಅವರ ಮೂಗು ಕೆಂಪಗೆ ದೊಡ್ಡದಾಗಿತ್ತು. ನಮ್ಮ ಅಜ್ಜನ ಬೇಲದ ನಶ್ಯದ ಬುರುಡೆಯಷ್ಟು ದಪ್ಪಗಿತ್ತು. ಸ್ವಲ್ಪ ಚುರುಕು ಬುದ್ಧಿಯವನೂ, ತಲೆಹರಟೆಯವನೂ ಆದ ನಂ.೪ ಹುಡುಗ ಆ ನಮ್ಮ ಭಾವೀಬೀಗರ ಮೂಗನ್ನು ನೋಡಿದರೆ ಏನಾ ದರೂ ವಕ್ರವಾಗಿ ಹೇಳಿಯಾನೆಂಬ ಭೀತಿಯಿಂದ ಅವನನ್ನು ಸಿದ್ಧಮಾಡ ಬೇಕೆಂದು ನಾನೂ ನನ್ನ ಗೃಹಿಣಿಯೂ ಪ್ರಯತ್ನಿಸಿದೆವು. ಆದರಂತೆ ಅವನಿಗೆ ಮೂರು ಕಾಸು ಲಂಚಕೊಟ್ಟು ನಮ್ಮ ಬೀಗರು ನಮ್ಮ ಮನೆಯಲ್ಲಿ ಇರುವ ವರೆಗೂ ಅವನು ಹೇಗೆ ವರ್ತಿಸಬೇಕೆಂಬುದರ ಬಗ್ಗೆ ಒಂದು ದೊಡ್ಡ ಉಪನ್ಯಾ ಸವನ್ನೇ ಕೊಟ್ಟೆವು. ಮತ್ತು ನಮ್ಮ ಬೀಗರ ಮೂಗಿನ ವಿಷಯವಾಗಿ ಏನೂ ಮಾತನಾಡಕೂಡದೆಂದು ಸ್ವಲ್ಪ ಬಿರುಸಾಗಿಯೇ ಹೇಳಿದೆವು. ಸರಿ ಅದಕ್ಕೆ ಅವನು ಒಪ್ಪಿಕೊಂಡು ನಾವು ಕೊಟ್ಟ ಲಂಚವನ್ನು ಚಡ್ಡಿ ಜೇಬಿಗೆ ಸೇರಿಸಿದ.

ನಮ್ಮ ಬೀಗರ ಮುಂದೆ ನಮ್ಮ ವೈಭವ ತೋರಿಸಲು ನೆರೆಹೊರೆಯವರ ಸಾಮಾನುಗಳನ್ನೆಲ್ಲ ಎರವಲು ತಂದಿದ್ದೆವು. ಬೀಗರು ನಮ್ಮ ಬಗ್ಗೆ ಬಹಳ ಸಂತೋಷಪಟ್ಟರು. ರಾತ್ರಿ ಊಟವಾದ ಮೇಲೆ ಕೊಡಕೊಳ್ಳುವ ವಿಷಯವಾಗಿ ಚರ್ಚಿಸುತ್ತ ಕುಳಿತಿದ್ದೆವು ನಾಲ್ಕನೆ ನಂಬರ್ ಹುಡುಗ ಮಹಡಿಯಿಂದ ಕೆಳಕ್ಕಿಳಿದುಬಂದ. ಅವನು ಬಂದಕೂಡಲೆ ನನ್ನ ಎದೆಯಲ್ಲಿ ಅವಲಕ್ಕಿ ಬತ್ತ ಕುಟ್ಟಿದಂತಾಯಿತು. ನಮ್ಮ ಬೀಗರ ಮೂಗನ್ನು ನೋಡಿ ಏನಾದರೂ ಹೇಳುವನೆಂಬ ಹೆದರಿಕೆಯಾಯಿತು. ಅವನಿಗೆ ಸುಮ್ಮನಿರಲು ನನ್ನ ಮೂಗಿನಮೇಲೆ ಬೆರಳಿಟ್ಟು ಏನೂ ಹೇಳಕೂಡದೆಂದು ಸಂಕೇತಮಾಡಿದೆ. ಆದರೂ ಹುಡುಗ ಸುಮ್ಮನಿರಲಿಲ್ಲ. “ಅಪ್ಪಾ, ನೀನು ಹೇಳಿದ್ದು ನನಗೆ ಗೊತ್ತಾಯಿತು, ಅವರ ಮೂಗನ್ನು ಸುಮ್ಮನೆ ನೋಡಿಕೊಂಡು ಹೋಗ್ತೇನೆ. ಏನೂ ಹೇಳೋಲ್ಲ” ಎಂದ. ಬೀಗರು ಬೆಪ್ಪಾದರು. ( ನಾವೂ ಆದೆವು ) ಹುಡುಗ ಮತ್ತೆ ಆರಂಭಿಸಿದ. “ಅದೇ ನೀನು ಹೇಳಿದ್ದೆಲ್ಲ ಅವರ ಬುರುಡೆ ಮೂಗುನೋಡಿ ಏನೂ ಹೇಳಬೇಡಾ ಅಂತಾ, ಅದಕ್ಕೆ ನೋಡಿ ಹೋಗೋಣ ಅಂತ ಬಂದಿದ್ದೆ” ಹೀಗಂತ ಹೇಳಿದವನೇ ಅಲ್ಲಿ ನಿಲ್ಲದೆ ಹೊರಟು ಹೋದ. ಅದರಂತೆಯೇ ಬೀಗರೂ ಅಲ್ಲಿ ನಿಲ್ಲದೆ ಹೊರಟುಹೋದರು. ಏನೋ ಒಳ್ಳೆಯ ಸಂಬಂಧ ಆಗಿದ್ದರೆ ಚೆನ್ನಾಗಿತ್ತು. ಆದರೆ ಹಾಳು ಹುಡುಗ ಕಲ್ಲುಹಾಕಿದ.

ಏನಾದರೇನು, ಇಷ್ಟೆಲ್ಲ ಹೇಳಲು ನನಗೆ ಮಕ್ಕಳಿದ್ದರಿಂದ ಸಾಧ್ಯವಾಯಿತಲ್ಲವೆ ? ಮಕ್ಕಳಿದ್ದ ಮನೆ ಚೆನ್ನ, ಅವು ಕಾಡಲಿ, ಬೇಡಲಿ !

ಶ್ರೀ ಬಸವರಾಜ ಕಟ್ಟೀಮನಿಯವರ ಕಾದಂಬರಿ

# ಜ್ವಾಲಾಮುಖಿಯ ಮೇಲೆ!

## ಪತ್ರಿಕಾಭಿಪ್ರಾಯಗಳು

....ಪಾತ್ರಪೋಷಣೆಯಲ್ಲಿ ಲೇಖಕರು ಹಿತಮಿತವಾದ ಆಸಕ್ತಿ ವಹಿಸಿದ್ದಾರೆ. ಎಚ್ಚರಿಕೆಯಿಂದ, ಸಂದರ್ಭೋಚಿತವಾಗಿ ಪಾತ್ರಗಳನ್ನು ನಟಿಸಲು ಬಿಟ್ಟಂತಿದೆ. ಯಾರಾರ ವ್ಯಕ್ತಿತ್ವ ಹೇಗಿರಬೇಕೋ, ಯಾರಾರ ಬಗ್ಗೆ ಕಾದಂಬರಿಯ ಮಟ್ಟಿಗೆ ಎಷ್ಟೆಷ್ಟು ತಿಳಿಯುವ ಅವಶ್ಯಕತೆಯಿದೆಯೋ ಅಷ್ಟನ್ನು ತಿಳಿಸಿದ್ದಾರೆ.

........ದೃಶ್ಯ ಕಲ್ಪನೆಯಲ್ಲಿ ಶ್ರೀ ಕಟ್ಟೀಮನಿಯವರದು ನುರಿತ ಕೈಯೆಂದು ಇಲ್ಲಿ ಕಾಣುತ್ತದೆ.

........ವರ್ಣನೆಗಳು ರಸಿಕತೆಯಿಂದ ಕೂಡಿ ಗಂಭೀರವಾಗಿವೆ. ಪ್ರತಿ ಪಾತ್ರವನ್ನೂ, ಪ್ರತಿ ಸನ್ನಿವೇಶವನ್ನೂ ವರ್ಣಿಸುವಾಗ ಅವು ನಮ್ಮ ಕಣ್ಮುಂದೆ ನಿಲ್ಲುವಂತಾಗುತ್ತದೆ. ಪ್ರಕೃತಿಯನ್ನು ಬಣ್ಣಿಸುವಾಗ ಕಾದಂಬರಿಕಾರರು ಕವಿಗಳಾಗಿದ್ದಾರೆ. ಕೂಲಿಕಾರರ ವಸತಿಗಳನ್ನು ವರ್ಣಿಸುವಾಗ ಅಷ್ಟೇ ದಿಟ್ಟ ತನದಿಂದ ಸತ್ಯವನ್ನು ನುಡಿದಂತಿದೆ.

........ಸಂಭಾಷಣೆ, ಕಾದಂಬರಿಯ ಓದುಗರನ್ನು ಆಕರ್ಷಿಸುವ ಇನ್ನೊಂದು ದಿವ್ಯಾಸ್ತ್ರ.

....ಕನ್ನಡ ಸಾಹಿತ್ಯದಲ್ಲಿ 'ಜ್ವಾಲಾಮುಖಿಯ ಮೇಲೆ!' ನಿಜವಾಗಿಯೂ ಒಂದು ಮಿರುಗುವ ರತ್ನ. ಶ್ರೀ ಕಟ್ಟೀಮನಿ ಇಂತಹ ಸತ್ವಪೂರ್ಣವಾದ ಕಾದಂಬರಿಗಳನ್ನು ಕನ್ನಡ ಸಾಹಿತ್ಯಕ್ಕೆ ಆಗಾಗ ಅರ್ಪಿಸುವರೆಂಬುದೇ ನಮ್ಮ ಹೃತ್ಪೂರ್ವಕ ಹಾರೈಕೆ.

—ವಾಕ್ಚಿತ್ರ

# ಶಾರದಾ ಪ್ರಕಟನಾಲಯದ ಪ್ರಕಟನೆಗಳು



| | | ಬೆಲೆ : |
|---|---|---|
| ೧. | ಕಾರವಾನ್ (ದ್ವಿತೀಯ ಮುದ್ರಣ) | ೧ ರೂ. ೪ ಆ. |
| ೨. | ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) | ೨ ರೂ. ೪ ಆ. |
| ೩. | ಜೀವನ ಕಲೆ | ೧ ರೂ. |
| ೪. | ಮುಗುಳುನಗೆ | ೧ ರೂ. ೪ ಆ. |
| ೫. | ಸ್ವಪ್ನಸುಂದರಿ | ೧ ರೂ. ೪ ಆ. |
| ೬. | ಆಲದ ಹೂ | ೧ ರೂ. ೧೨ ಆ. |
| ೭. | ಹುಡುಗಾಟ | ೧ ರೂ. ೪ ಆ. |
| ೮. | ಶವದಮನೆ | ೧ ರೂ. ೪ ಆ. |
| ೯. | ಎದಿರೇಟು | ೧ ರೂ. ೮ ಆ. |
| ೧೦. | ಸರ್ವಮಂಗಳ | ೪ ರೂ. ೮ ಆ. |
| ೧೧. | ಕೇಡಿಗನ ಕಿಡಿಗಳು | ೧ ರೂ. |
| ೧೨. | ದೇವತೆಗಳು ನಕ್ಕಾಗ | ೧ ರೂ. ೪ ಆ. |
| ೧೩. | ಜ್ವಾಲಾಮುಖಿಯ ಮೇಲೆ | ೪ ರೂ. |
| ೧೪. | ನನ್ನರಸಿಕ ಮತ್ತು ಬಂಗಾರದ ಗೆಜ್ಜೆ | ೧ ರೂ. ೮ ಆ. |
| ೧೫. | ಹಾಳುಮೂಳು | ೧ ರೂ. |
| ೧೬. | ನಾಡಿಗೇರರ ನಗೆಬರಹಗಳು. ೧. | ೧ ರೂ. ೪ ಆ. |